ಪಿತೃದೇವತೆಗಳೆಲ್ಲ ಸ್ವರ್ಗವಾಸಿಗಳಾಗುವರು। ಅಮಾವಾಸ್ಯೆ ಹುಣ್ಣಿಮೆಗಳಲ್ಲಿ ಪಠನ ಮಾಡಿದರೆ ಯಮ ಕಿಂಕರರ ಭಯವೇ ಇಲ್ಲ। ಯಮ ಪುರಿಯ ದರ್ಶನವೇ ಇಲ್ಲ ಎಂಥ ಕೈಲಾಸವು ಎಂಥ ವೈಕುಂಠವು। ಎಂಥ ವೈಭೋಗವು ಕೃಷ್ಣ॥

**ಕೋಟಿಸೂರ್ಯ ಪ್ರಭಾಪೂರ್ಣೆ** ರಾಗ: ಅಭೋಗಿ

ಕೋಟಿಸೂರ್ಯ ಪ್ರಭಾಪೂರ್ಣೆ ನಿನಗೆ ಮಂಗಳಾರತಿ। ಮಾತೆಗೆ, ಭೂಮಾತೆಗೆ, ಗೋಮಾತೆಗೆ, ಶರಣಾಗತಿ॥ಪ॥ ಕಾಯುವವರ ಕಾಯುವವಳೆ ತಾಯಿ ಪುಣ್ಯಕೋಟಿಯೇ। ಅನ್ನ ಕೊಡುವ ಅನ್ನಪೂರ್ಣೆ ನಿನಗೆ ಯಾರು ಸಾಟಿಯೇ?॥ ಕಸವ ಕೂಡ ರಸಮಾಡುವ ಪರಮಾದ್ಭುತ ಗೀತೆಯೆ। ಪ್ರೀತಿಯೊಂದೆ ನೀತಿಯೆನುವ ಮಾತಿಲ್ಲದ ಮಾತೆಯೆ॥1॥ ಮಂಗಲ ಪ್ರದೆ, ಮಂಗಳಾಂಗಿ ತಾಯೇ ಶುಭಮಂಗಳೇ। ಬಾಳಿನಂಧಕಾರ ಕಳೆವ ಹಾಲಿನ ಬೆಳದಿಂಗಳೇ। ದೇವಲೋಕವನ್ನು ಮರ್ತ್ಯದಲ್ಲೆ ತೆರೆವ ಕಂಗಳೇ। ಯಾರಮ್ಮಾ ನಿನಗೆ ಸಮಾ ತಾಯಿ ಸರ್ವಮಂಗಳೇ॥2॥ ಬಲಿಯಾದರೆ ನೀನು ಇಡೀ ಲೋಕವೆಲ್ಲ ತಬ್ಬಲಿ। ಉಳಿದು ಉಳಿಸು ಮಕ್ಕಳನ್ನು ನಿನ್ನ ಕರುಣೆ ಕಾಯಲಿ। ಕ್ಷೀರದಾತೆ ಲೋಕಮಾತೆ ಅಮೃತಶರಧಿ ಜಾತೆಯೇ। ಪ್ರಾಣೆ ಎನ್ನಬಹುದೆ ನಿನ್ನ ಲೋಕಪ್ರಾಣದಾತೆಯೇ॥

**ಗಾವೋ ಮಮಾಗ್ರತಃ ಸಂತು ಗಾವೋ ಮೇ**

ಗಾವೋ ಮಮಾಗ್ರತಃ ಸಂತು ಗಾವೋ ಮೇ ಸಂತು ಪೃಷ್ಠತಃ। ಗಾವೋ ಮೇ ಹೃದಯೇ ನಿತ್ಯಂ ಗವಾಂ ಮಧ್ಯೇ ವಸಾಮ್ಯಹಮ್॥ ಸುರಭಿಸ್ತ್ವಂ ಜಗನ್ಮಾತಃ ನಿತ್ಯಂ ವಿಷ್ಣುಪದೇ ಸ್ಥಿತಾ। ಮಾತರ್ಮಾಯಾಭಿಲಷಿತಂ ಸಫಲಂ ಕುರು ನಂದಿನಿ॥

**ಸುರಭಿರ್ವೈಷ್ಣವೀ ಮಾತಃ**

ಸುರಭಿರ್ವೈಷ್ಣವೀ ಮಾತಃ ಸುರಲೋಕೇ ಮಹೀಯ ಸೇ। ಗ್ರಾಸಮುಷ್ಟಿರ್ಮಯಾ ದತ್ತಾ ಸುರಭೇ ಪ್ರತಿಗೃಹ್ಯತಾಮ್॥

# ಜನಪದಗೀತೆಗಳು (ಸಾಮಾನ್ಯ)

**ಅತ್ತಿಯ ಮರವಾ (ಶಿವಪಾರ್ವತಿ-ಶೋಭಾನೆ)** ರಾಗ: ಪುನ್ನಾಗವರಾಳಿ

ಅತ್ತಿಯ ಮರವಾ ಕಿತ್ತು ನೆಡುವೋರುಂಟೆ। ಅತ್ತಿಲ್ಲದ ಮನೆಗೆ ಗೌರಿಯ॥2ಸಾರಿ॥ ಕೊಟ್ಟರೆ ಒಪ್ಪಾ ಇನ್ನಾರು ಕಲಿಸೋರು॥ ಅತ್ತೇಯು ನಾನೇಯ ಮಾವಾನು ನಾನೇಯ। ಮತ್ತೆ ಸೋದರಿಕೆ ಗೌರೀಗೆ॥2ಸಾರಿ॥ ಒಪ್ಪವ ನಾನೇಯ ಕಲಿಸುವೆ॥ ಆಲದ ಮರವ ಸೀಳಿ ನೆಡುವೋರುಂಟೆ ಮಾವಿಲ್ಲದ ಮನೆಗೆ ಗೌರಿಯ॥2ಸಾರಿ॥ ಕೊಟ್ಟರೆ ಆಯಾವ ಇನ್ನ್ಯಾರು ಕಲಿಸೋರು॥ ಮಾವಾನು ನಾನೇಯ ಭಾವಾನು ನಾನೇಯ ಮತ್ತೆ ಸೋದರಿಕೆ ಗೌರೀಗೆ॥2ಸಾರಿ॥ ಆಯಾವ ನಾನೇಯ ಕಲಿಸುವೆ॥ ಅವರ್ದಾದಿಲುಣ್ಣೋರು ಬೀದೀಲಿ ಒರಗೋರು। ತ್ಯಾಗದೆಲೆ ಹಿಡಿದು ತಿರಿದುಣ್ಣೋರು॥ ತ್ಯಾಗದೆಲೆ ಹಿಡಿದು ತಿರಿದುಂಬೊ ಜಂಗಮಗೆ ತಾಯಿ ಸಿರಿಗೌರಿ ಮನಸಾದಾ॥ ಪಾತಾಳ ಕಂಬಕು ಆಕಾಶ ಡಿಂಬಕ್ಕು। ಹಾಕ್ಯಾರು ಮುತ್ತಿನ ಚಪ್ಪರವ॥2ಸಾರಿ॥ ಕಟ್ಯಾರು ತೋರಣ ಮಾಡ್ಯಾರು ಸಿರಿಗೌರಿಯ ಮದುವೆಯ॥

**ಅಲ್ಲೈತೆ ನೋಡು ನಮ್ಮ ಹೊಲ** ರಾಗ: ಪುನ್ನಾಗವರಾಳಿ

ಅಲ್ಲೈತೆ ನೋಡು ನಮ್ಮ ಹೊಲ। ಸೀಮ್ಯಾಗೆ ಇಲ್ಲ ಇಂಥ ನೆಲ। ಭೂಮ್ಯಾಗೆ ನಿಂತು ನಾವು ಬದುಕನ್ನು ಮಾಡಿದಾಗ। ಕೊಡ್ತಾಳೆ ಭೂ ತಾಯಿ ಎಂಥ ಫಲ॥1॥ ಕರಿ ಎತ್ತು ಬಿಳಿ ಎತ್ತು ಹೂಡಿಕೊಂಡು। ಕೊಲ್ಹಾರ ಬಂಡಿ ಹೊಡಕೊಂಡು। ಬಂಡೀಲಿ ಬುತ್ತೀನ ಇಟ್ಟುಕೊಂಡು। ನಾ ಹೊಂಟೀವ್ನಿ ಹೆಂಡತಿ ಕಟ್‌ಕೊಂಡು॥2॥ ತಿಳಿಹಸಿರು ಸೀರೆಯನುಟ್ಟಿಹಳು। ತೆನೆಯಂತ ನತ್ತ ನಿಟ್ಟಿಹಳು। ತಲೆ ಹಾಕಿ ಥಕಥಕ ಕುಣಿದಿಹಳು। ಭೂತಾಯಿ ಬಡತನ ನೀಗುವಳು॥3॥

**ಆಕಳ್ ಬೆಣ್ಣೆ ಮೂಗಳ್ ಮುದ್ದೆ** **ರಾಗ: ಕಾಪಿ**

ಆಕಳ್ ಬೆಣ್ಣೆ ಮೂಗಳ್ ಮುದ್ದೆ ಮೂಸಕ್ನೆ ಮೂಸುತಿದ್ದೆ। ಗೀಸಕ್ನೆ ಗೀರುತಿದ್ದೆ ಗಿಲ್ ಗಿಲ್ ಗೆಜ್ಜೆ ಸಪ್ಪದ್ದಂಗ। ಥಾ ದಿಮ್ಮಿ ಥಾ ದಿಮ್ಮಿ ತಕ ತಾಳ ಮೃದಂಗದ ಗೆಳತೀ...... ಗೆಳತೀ।। ಏ ಹುಡ್ಗಿ ಏನ್ ಹೇಳ್ಲಿ। ಹುಕುಂನಂಗೆ ಠೊಣಕ್ಕನೆ ಹಾರುತೀಯ ತಾಳಮ್ಯಾಳ ಬಾರಸ್ತೀಯ ಅಗರಬತ್ತಿ ಹಚ್ಚಿದ್ದಂಗ ಚಿಟ್ವಾಲೆ ಚೀರಿದ್ದಂಗ। ಚಟಕ್ಕಂತ ಒಳ್ಳೆ ಬೆಳ್ಳಕ್ಕೀನೆ ಆಗಿವ್ನಿ। ಎಲ್ಲಿಗೆ ಹೊಂಟಿರುವೆ ನಡಿಯೆ... ನಡಿಯೆ।।1।। ನೀ ರುಕುಮಣಿ ಗೊಂಬೆಹಾಂಗ ಯಾಕಿಲ್ಲಿ ನಿಂತಿರುವೆ। ಬಾಯ್ ಬಿಟ್ಟು ಮಾತಾಡೆ ಮನಸ್ಸು ಮುರಿಬ್ಯಾಡೆ। ಅಗರ್‌ಬತ್ತಿ ಹಚ್ಚಿದ್ವಾಂಗ ಚಿಟ್ವಾಲೆ ಚೀರಿದ್ದಂಗ। ಚಟಕ್ಕಂತ ಒಳ್ಳೆ ಬೆಳ್ಳಕ್ಕೀನೆ ಆಗಿವ್ನಿ ಎಲ್ಲಿಗೆ ಹೊಂಟಿರುವೆ ನಡಿಯೆ........ ನಡಿಯೆ।।2।।

**ಎತ್ತಿನ ಕೊರಳಿನ ಗೆಜ್ಜೆಯ ನಾದ** **ರಾಗ: ಕಲ್ಯಾಣವಸಂತ**

ಎತ್ತಿನ ಕೊರಳಿನ ಗೆಜ್ಜೆಯ ನಾದ ಕಿಲ ಕಿಲ ಎನುತಿರಲಿ। ಭೂಮಿ ತಾಯಿಯ ಕರುಣಾ ಕಣವು ಮನೆಯಾಗ ತುಂಬಿರಲಿ। ಲಲಲ್ಲಾ ಲಾಲಲಾಲಲಾ ಲಲಲ್ಲಾ ಲಾಲಲಾಲಲಾ।। ಬೆಳ್ಳಿಯು ಮೂಡಿತು ಮೂಡಣ ಬೆಳಗಿತು ಹಕ್ಕಿಯು ಹಾರಾಡಿ। ಚಿಲಿಪಿಲಿ ಎನ್ನುತ ಇಂಚರ ಗೈಯುತ ರೈತನ ಜೊತೆಗೂಡಿ। ಲಲಲ್ಲಾ ಲಾಲಲಾಲಲಾ ಲಲಲ್ಲಾ ಲಾಲಲಾಲಲಾ।। ಕೆಸರಿನ ಕಡಲು ಹಸುರಿನ ಒಡಲು ಸಂತಸದಾ ಹೊನಲು। ನಿಸರ್ಗದೇವಿ ನಿಟ್ಟುಸಿರೆಳೆದರೆ ಬಾಳೆಲ್ಲಾ ಬರಡು। ಲಲಲ್ಲಾ ಲಾಲಲಾಲಲಾ ಲಲಲ್ಲಾ ಲಾಲಲಾಲಲಾ।। ಹಗಲಿರುಳೆನ್ನದೆ ಅನ್ಯವನರಿಯದೆ ಅನ್ನಕ್ಕಾಗಿ ದುಡಿವ। ಉನ್ನತವಾದ ರಾಜ್ಯವ ಕಟ್ಟಲು ದೇಹವನೆ ಕೊಡುವ। ಲಲಲ್ಲಾ ಲಾಲಲಾಲಲಾ ಲಲಲ್ಲಾ ಲಾಲಲಾಲಲಾ।।

**ಎಳ್ಳು ಹೊಲದಾಗಿರುವ** **ರಾಗ: ಸಾವೇರಿ**

ಎಳ್ಳು ಹೊಲದಾಗಿರುವ ದೊಳಹೊಟ್ಟೆ ಬೆನವಣ್ಣ। ಎಳ್ಳೆಲೆ ತುಪ್ಪ ತಿಳಿದುಪ್ಪ।।-ಸಲಿಸುವೆ। ದೊಳ ಹೊಟ್ಟೆ ಬೆನವ ಕೊಡು ಮತಿಯ।। ಹಳ್ಳ ಕೊಳ್ಳಾದಲ್ಲಿ ಮುಳ್ಳಾಜಿ ವನದಲ್ಲಿ। ಗಂಗೆ ದಡದಲ್ಲಿ ಅರಸೀದೆ।। ಸರಸತಿಯೆ। ಎಲ್ಲಿ ಹೋದ್ಯಮ್ಮ ಪದ ಬರಲಿ।।

**ಒಳ್ಳೇವ್ರ ಗೆಳೆತನ** **ರಾಗ: ಸಾವೇರಿ**

ಒಳ್ಳೇವ್ರ ಗೆಳೆತನ। ಕಲ್ಲುಸಕ್ಕರಿ ಹಾಂಗ। ಖುಲ್ಲರ ಗೆಳೆತನ ಮಾಡಿದರ ನನಕಂದ। ಸಲ್ಲದ ಮಾತು ಬರುತಾವ।। (ಬರ್ತಾವ)।। ಮಂದಿ ಮಕ್ಕಾಳೊಳಗ ಚೆಂದಾಗಿ ಇರಬೇಕು। ನಂದಿಯ ಶಿವನ ದಯದಿಂದ ಹೋಗ್ವಾಗ ಮಂದಿ ಬಾಯಾಗ ಇರಬೇಕು।। ಕೊಟ್ಟು ಕುದಿಯಲು ಬೇಡ। ಇಟ್ಟು ಹಂಗಿಸಬೇಡ। ಎಷ್ಟುಂಡರೆಂದು ಅನಬೇಡ ಈ ಮೂರು ಮುಟ್ಯಾವ ಶಿವನ ಸದರೀಗಿ।। ಹಿರಿಯರಿಗೆ ಹಿರಿಯನ್ನು ಕಿರಿಯರಿಗೆ ಕಿರಿಯನ್ನು ನರೆಗಡ್ಡದ ಮುದುಕರ ಕಂಡರೆ ತಲೆಬಾಗಿ ನಡೆಯೋ ನನಕಂದ।। ಆಚಾರಕ್ಕರಸಾಗು ನೀತಿಗೆ ಪ್ರಭುವಾಗು। ಮಾತಿನಲಿ ಚೂಡಾಮಣಿಯಾಗು ಕಂದಯ್ಯ ಜ್ಯೋತಿಯೇ ಆಗು ಜಗಕೆಲ್ಲ।।

**ಕಣ್ಣು ಕಾಣುವ ತನಕ** **ರಾಗ: ಶಿವರಂಜನಿ**

ಕಣ್ಣು ಕಾಣುವ ತನಕ ಬೆನ್ನು ಬಾಗುವ ತನಕ। ತಾಯಿರಲಿ ನನ್ನ ತವರಿರಲೀ। ತಾಯಿರಲಿ ನನ್ನತವರಿರಲಿ ನನ್ನವ್ವ। ಅಣ್ಣಯ್ಯರಿರಲಿ ಕರಸಾಕೆ।।ಪ।। ಸೀರೆ ಹರಿದರೆ ಸೇರಿಸಿ ಉಡಬೌದು। ನಾರಿ ತಪ್ಪಿದರೆ ತರಬೌದು। ನಾರಿ ತಪ್ಪಿದರೆ ತರಬೌದು ಅಣ್ಣಯ್ಯ। ಹಡದಮ್ಮಾ ನೆಲ್ಲಿ ತರಬೌದು ।।1।। ಮಜ್ಜಾನದೊತ್ತಿಗೆ ಮಜ್ಜಿಗೆ ಮುಗಿಯದೆ। ರುದ್ರಾಕ್ಷಿಯಾದೆ ಕೊರಳಿಗೆ। ರುದ್ರಾಕ್ಷಿಯಾದೆ ಕೊರಳಿಗೆ। ನನ್ನಪ್ಪಗೆ ಮುದ್ದಿನ ಹಿರಿಯ ಮಗಳಾದೆ।।2।। ಮನೆಯ ನೋಡಿದರೆ ಸೊಸೆದಿರಪ್ಪಯ್ಯನ। ಮಾಳಿಗೆನೋಡಿದರೆ ಮಗದೀರು। ಮಾಳಿಗೆ ನೋಡಿದರೆ ಮಗದೀರಪ್ಪಯ್ಯನ। ಮಂಚನೋಡಿದರೆ ಅಳಿಯದೀರು।।3।। ನೀರ ಮೇಲೆ ನೀರು ನೀರಾಚೆ ತಾವರೆ। ತಾವರೆಯಾಚೆ ತವರೂರು। ತಾವರೆಯಾಚೆ ತವರೂರಿಗ್ಹೋದರೆ। ತಿರುಗಿ ಬರುವುದಕೆ ಮನಸಿಲ್ಲ।।4।।

### ಕಿನ್ನುಡಿ ನುಡಿಸೋನ ದನಿ ಚೆಂದವೋ ರಾಗ: ಭೀಮ್ ಪಲಾಸ್

ಕಿನ್ನುಡಿ ನುಡಿಸೋನ ದನಿ ಚೆಂದವೋ। ಕಿನ್ನುಡಿ ನುಡಿಸೋನ ಬೆಳ್ಳು ಚೆಂದವೋ। ಕಿನ್ನುಡಿ ನುಡಿಸೋನ ಬೆಳ್ಳಿನ್ ಚೆಂದವ ನೋಡಿ। ಬೆಳ್ಳಿ ಉಂಗ್ರಕೆ ನಾರಿ ಗ್ಯಾನ ಬಿದ್ದಳೇ। ಚುಕ್ಕೀ ಉಂಗ್ರಕ್ಕೆ ನಾರಿ ಮನಸಿಟ್ಟಳೇ॥ಪ॥ ಎಲ್ಲೋ ಜೋಗಪ್ಪ ನಿನ್ ಅರಮಾನೇ। ಎಲ್ಲೋ ಜೋಗಪ್ಪ ನಿನ್ ತಳಮಾನೇ। ಅಂಟ್ರಮುಖಿ ದಂಟ್ರಮುಖಿ ಇಲ್ಲೀಗರವತ್ತು ಗಾವುದ್ ಅರಮಾನೇ। ಇಲ್ಲೀ ಗೆಪ್ಪತ್ತು ಗಾವುದ್ ತಳಮಾನೇ॥1॥ ಇದ್ದಬಿದ್ದ ಬಟ್ಟೆನೆಲ್ಲ ಗಂಟುಮೂಟೆ ಕಟ್ಟಿಕೊಂಡು। ಹೊಂಟಳು ಜೋಗಪ್ಪನ ಹಿಂದುಕೂಟೇ। ಹೊಂಟಳು ಜೋಗಪ್ಪನ ಮುಂದುಕೂಟೇ॥2॥ ಎಲ್ಲೋ ಜೋಗಪ್ಪ ನಿನ್ ಅರಮಾನೇ। ಎಲ್ಲೋ ಜೋಗಪ್ಪ ನಿನ್ ತಳಮಾನೇ। ಅಂಟ್ರಮುಖಿ ದಂಟ್ರಮುಖಿ। ಇಲ್ಲೀಗರವತ್ತು ಗಾವುದ್ ಅರಮಾನೇ। ಇಲ್ಲೀಗೆಪ್ಪತ್ತು ಗಾವುದ್ ತಳಮಾನೆ॥3॥ ಎಳ್ಳಿನ್ ಹೊಲವಾ ಬಿಟ್ಟೆ ಒಳ್ಳೇ ಗಂಡನ ಬಿಟ್ಟೆ। ತಳ್ಳಾಡ್ತ ಜೋಗಿಕೂಟೆ ಬರಬೌದೇ ನಾನ್ ಹೊಳ್ಳಾಡ್ತ ಜೋಗೀಕೂಟೆ ಬರಬೌದೆ॥4॥ ಕಡಲೇ ಹೊಲವಾ ಬಿಟ್ಟೆ ಕಡಿದಾಡೋ ಗಂಡನ ಬಿಟ್ಟೆ। ಕೆಡವಾಡ್ತ ಜೋಗಿ ಕೂಟೆಬರಬೌದೆ ನಾನ್। ಬಡಿದಾಡ್ತ ಜೋಗಿ ಕೂಟೆ ಬರಬೌದೆ?॥5॥ ಉದ್ದಿನ್ ಹೊಲವಾ ಬಿಟ್ಟೆ ಮುದ್ದಾಡೋ ಗಂಡನ ಬಿಟ್ಟೆ। ಗುದ್ದಾಡ್ತ ಜೋಗಿಕೂಟೆ ಬರಬೌದೆ? ನಾನ್ ಒದ್ದಾಡ್ತ ಜೋಗಿಕೂಟೆ ಬರಬೌದೆ?॥6॥ ಅಂತರ್ ಘಟ್ಟ ಬೆಂತರ್ ಘಟ್ಟ ಹತ್ದೊಳ್ಲ್ಲ ಇಳಿದೊಳಲ್ಲ ಗಂಟುಮೂಟ್ಟೆ ಹೊತ್ಕೊಂಡು ಬರಬೌದೇ?ನಾನ್ ಜೋಗಿ ಹಿಂದೆ ನಂಬಿ ಓಡಿ ಬಂದೇನೆ॥7॥

### ಕುಡ್ಕ ಅಂತ ಆಡ್ಕಬ್ಯಾಡ

ಕುಡ್ಕ ಅಂತ ಆಡ್ಕಬ್ಯಾಡ। ಕುಡ್ದುಬುಟ್ಟಿದ್ದೀನಿ ಯಂಡ। ನಾನಿನ್ನ ದೂರ್ದಾಗ್ ಕಂಡೆ। ಕಿಲ್ ಕಿಲ್‌ನ್ಯಾಕ್ ನಗ್ತೀ। ಬಾಯ್ನಾಗಿರೋ ಅಲ್ ತೋರ್ಸ್ಲೋನಿಂಗೆ। ನಾ ಏನ್ ಏಳ್ಲಿ. ಕುಡ್ದ್ ಮತ್ನಾಗೆ ಯಂಡ್ರು ಮಕ್ಳು ನೆಪ್ಪಿಗ್ ಬಂದು। ಮನೆದಾರಿಯಿಡ್ಕಂಡ್ ವಂಟೆ। ದಾರ್‍ಯಾಗೆ ಮೋರ್‍ಯಾಗ್ ಬಿದ್ದು ಮಾರೆ ಕೈಕಾಲೊಡ್ಕಂಡೆ॥ ಮಕ್ಳು ಬಂದು ಅಪ್ಪನ್ ಕಂಡು ಕೈಯ್ಯಾ್ಇಡ್ಕಂಡ್ ನಡ್ಸಕೊಂಡೋಗಿ। ಕೊಳ್ಚೆನೆಲ್ಲಾ ತಣ್ಣೀರಾಗ್‌ತೊಳ್ದ್। ಗಾಯಪಾಯಕೋಸ್ದಿ ಆಕಿ। ಬಣ್ಣದ್ ಗಿಣ್ಣದ್ ಬಟ್ಯಾಗೆ ಸುತ್ ಬಿಟ್ರು। ಮನೆಯಾಗ್ ನಿಂತು ತೂರಾಡ್ತಿದ್ದೆ। ಮನೆಮಠ ಆಕಾಸೆಲ್ಲಾ ತಿರ್‍ಗ್‌ತಿತ್ತ್ ನೆಲದಮ್ಯಾಗೆ ಕಾಲೇನಿಲ್ದಂಗಾತು। ಪರಾಮಾತ್ಮೋಟ್ಟೆವಳ್ಗೆ ಪದಯೇಳ್ತಿದ್ದ। ಬಾಯಾಗ್ ಮಾತ್ ಬಂದ್, ತೊದ್ಲುತಿದ್ರು ಲೆಕ್ಕಾಚಾರ ಬಿಟ್ಟಿರ್‍ಲಿಲ್ಲ॥ ಅಂಗೆ ನೆಲ್ಕೆ ಕೈಯ್ಯೂರಿ ನಿಂತ್, ಮ್ಯಾಕೆಕೆಳಕ್ನೋಡ್ದೆ। ಉರ್‍ಯಾಬಲ್ಬನಾಕ್‌ಕಂಡು ಅಂಗೆ ಮಿಣ್ ಗುಡ್ತಿತ್ತು॥ ಯಾವ್ದ್ ಉರಿತೈಯ್ತೆ ಯಾವ್ದ್ ಉರಿಯಾಕಿಲ್ಲ ಅನ್ನಂಗಾತ್ನಂಗ ಕೈಯ್‌ಬೀಸಿಡ್ಯಾಕೋದೆ। ಬಲ್ಬೆವಡ್ದೋಯ್ತು ಆಲಿನ್ ಬಲ್ಬ್ ತಂದಿದ್ ಮಗ...। ಮನೆ ಕತ್ಲಾತ್ ಮನ್ಸೆ ಕತ್ಲಾತ್। ದಿಕ್ಕೆ ತೋಚದಂಗಾತುನಂಗೆ। ಆದ್ರೇನ್ ಬಾಯಾಗ್ ಪರ್‍ಮಾತ್ಮಾಡ್ತಿದ್ದ॥ ಯಂಡ್ರ್ ಮಕ್ಳ್ ಚ್ಯಾಪೆಮ್ಯಾಗೆ। ನೆಲ್ದ್ ಮ್ಯಾಗೆ ಮಕ್ಕಂಡಿದ್ರು। ನಂಗು ಅಂಗೆ ನಿದ್ದೆ ಬಂದು। ಭೂಮಿಮ್ಯಾಗ್ ವರಳ್ ಬುಟ್ಟೆ, ಕುಡ್ಕ ಅಂತ ಆಡ್ಕಬ್ಯಾಡ। ಕುಡ್ದು ಬುಟ್ಟಿದ್ದೀನಿಯಂಡ॥

### ಕೆರೆಯ ದಾರಿಯಲಿ ರಾಗ: ಶಿವರಂಜನಿ

ತಾನಿ ತಾನಿ ತಂದಾನ ತಾನನೋ ತಾನಿ ತಾನಿ ತಂದಾನನೋ। ತಾನಿ ತಾನಿ ತಂದಾನ ತಾನನೋ ತಾನಿ ತಂದನಾ ತಾನಾನೋ॥ ಕೆರೆಯ ದಾರಿಯಲಿ ನೀರ ತರುತಿರಲು ಹೆಸರ ಕೇಳಿದನು ಗೊಲ್ಲನೂ ಹಸಿರು ಬೇಲಿಯಲಿ ಎಸೆದು ಚಾಟಿಯನು ಒಸಗೆಯಾಯಿತೇ ಎಂದನು॥ ಕೇಳು ಚೆನ್ನಿಗನೆ ನೂರು ಬೆಳ್ಳಿಯನು ಚೆಲ್ಲಿ ಕೇಳಿದನು ಮುದುಕನೂ ಮಾರಿಕೊಂಡಿತೂ ಕೇರಿಕೊಂಡಿತೂ ನನ್ನ ಬಳಗವೇ ನನ್ನನೂ॥ ಮಾರಿಕೊಂಡಿತೂ ಕೇರಿಕೊಂಡಿತೂ ನನ್ನ ಬಳಗವೇ ನನ್ನನೂ ತಾ॥ ನಿನ್ನ ನೋಟವೆ ಚಂದದಾರಿಗಳು। ನಿನ್ನ ನುಡಿಗಳೇ ಕಿಡಿಗಳು। ಮನಸು ಮಲ್ಲಿಗೆಯು ಆದರೆ। ನಿನ್ನ ದೇವರಿಗೆ ಮೀಸಲು॥ ನೀರ ತರುತಿರುವ ನಿನ್ನ ನೋಡಿದೆನು। ಚೆಲುವು ಕಣ್ಮನ ಮಿಡಿಯಿತು। ಇಂಥ ಚೆಲುವಿಗೆ ಇನ್ನೆಂಥ ಚೆನ್ನಿಗನು। ಜೋಡಿ ಎಂದೇನೊ ನುಡಿಯಿತು॥ ಆದಕೆ ಕೇಳಿದೆನು ಮುದುಕಗಂಡನೆ ಸಾಕು ನಿಲ್ಲಿಸಾ ಕಥೆಯನು। ನಿನಗೆ ನೆಮ್ಮದಿಯು ಇಲ್ಲವಾದರೆ। ತೆರಳು ತೆರಳುವೆನು ಎಂದನು॥

**ಚೆಲುವು ಚೆಲುವೆಂದು** **ರಾಗ: ಸಾವೇರಿ**

ಚೆಲುವು ಚೆಲುವೆಂದು ಅತಿಯಾಸೆ ಪಡಬ್ಯಾಡ। ಚೆಲುವಿದ್ದರೇನು ಗುಣವಿಲ್ಲಾ।।2ಸಾರಿ।। ಕೊಳದ ನೀರು। ತಿಳಿಯಿದ್ದರೇನು ರುಚಿ ಇಲ್ಲಾ।।1।। ಕೆಂಪು ಹೆಂಡತಿ ಎಂದು ಸಂತೋಷ ಪಡಬ್ಯಾಡಾ। ಅತ್ತಿಯ ಹಣ್ಣು ಬಲು ಕೆಂಪು।।2 ಸಲ।। ಇದ್ದರೂ ಒಳಗೆ ನೋಡಿದರೆ ಹುಳು ಬಹಳ।।2।। ಕಪ್ಪು ಹೆಂಡತಿಯೆಂದು ಕರಕರೆ ಮಾಡಬೇಡ। ನೇರಳೆಯ ಹಣ್ಣು ಬಲು ಕಪ್ಪು।। 2 ಸಲ।। ಇದ್ದರೂ। ತಿಂದು ನೋಡಿದರೆ ರುಚಿ ಬಹಳ।।3।। ಸಾವಿರ ವರಹ ಕೊಟ್ಟರು। ಸವತಿಯರ ಮನೆಬೇಡ।। ಸಾವಿರದ ಮೇಲೆ ಐನೂರು।।2 ಸಲ।। ಕೊಟ್ಟರೂ ಬಲಮಕ್ಕಳಿರುವಾ ಮನೆಬೇಡ।।4।। ಬಂಗಾರದ ಬಳೇ ತೊಟ್ಟು। ಬಡವರಿಗೆ ಬೈಬೇಡ।। ಬಂಗಾರ ನಿನಗೇ ಸ್ಥಿರವಲ್ಲಾ।। 2 ಸಲ।। ಮಧ್ಯಾಹ್ನ ಸಂಜೆ ಆಗುವುದು ತಡವಲ್ಲಾ।।5।। ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ ಜಾಲಿಯ ಮರವು ನೆರಳಲ್ಲ। ಜಾಲಿಯ ಮರವು ನೆರಳಲ್ಲ ಹೆಣ್ಣಿಗೆ ತಾಯಿಯ ಮನೆಯು ಸ್ಥಿರವಲ್ಲ।।2ಸಲ।। ಮಗಳೆ ತಾಯಿಯ ಮನೆಯು ಸ್ಥಿರವಲ್ಲ।।6।।

**ಜಾಯಿಕಾಯಿ ಜಾಯಿಪತ್ರೆ (ಸಂಭಾಷಣಾಗೀತೆ)** **ರಾಗ: ಪುನ್ನಾಗವರಾಳಿ**

ಜಾಯಿಕಾಯಿ ಜಾಯಿಪತ್ರೆ ಹಿಪ್ಪಲ್ಲಿಲವಂಗಚಕ್ಕೆ। ಕಟ್ಟಿಹೋಗೋ ಸೆರಗೀಗೆ। ಸಿಂಗಾರಿ ಜಾಣ। ಕಟ್ಟಿಹೋಗೋ ಸೆರಗೀಗೆ। ಲಲ್ಲಾರಿ ಜಾಣ। ಕಟ್ಟಿಹೋಗೋ ಸೆರಗೀಗೆ। ಧಿಂ ಹತ್ತ ಹತ್ತ ದಿನ್ನಾ। ಧೀಂ...ಹತ್ತ ಹತ್ತ ದಿನ್ನಾ...। ಧೀಂ...।।ಪ।। ವಂಕಿಗಿಂಕಿ ತೊಡೊಳಲ್ಲ ಬರಿ ಕಿವಿಯಲಿ ಇರುವೊಳಲ್ಲ। ಇರುವೊಳಲ್ಲ ಮನೆಯೊಳಗೆ। ಲಲ್ಲಾರಿ ಜಾಣ। ಇರುವೊಳಲ್ಲ ಮನೆಯೊಳಗೆ। ಸಿಂಗಾರಿ ಜಾಣ। ಇರುವೊಳಲ್ಲ ಮನೆಯೊಳಗೆ। ಧೀಂ... ಹತ್ತ ಹತ್ತ ದಿನ್ನಾ। ಧೀಂ... ಹತ್ತ ಹತ್ತ ದಿನ್ನಾ ಧೀಂ।।1।। ಮುತ್ತಿನ ಬಳೆಯ ತರಿಸಿಕೊಡುವೆ। ಮುತ್ತಿನ ಜುಮುಕಿ ಮಾಡಿಸಿಕೊಡುವೆ। ಬಾರೆನನ್ನ ಜೊತೆಯಾಗೆ। ಸಿಂಗಾರಿ ಜಾಣೆ ಬಾರೆ ನನ್ನ ಜೊತೆಯಾಗೆ। ಲಲ್ಲಾರಿ ಜಾಣೆ ಬಾರೆ ನನ್ನ ಜೊತೆಯಾಗೆ। ಧೀಂ... ಹತ್ತ ಹತ್ತ ದಿನ್ನಾ। ಧೀಂ... ಹತ್ತ ಹತ್ತ ದಿನ್ನಾ ಧೀಂ।।2।।ಬೆಳ್ಳಿಗೆಜ್ಜೆ ತರಿಸಿಕೊಡುವೆ। ಬೆಳ್ಳಿ ಉಂಗುರ ಮಾಡ್ಸಿಕೊಡುವೆ। ಬಾರೆನನ್ನ ಜೊತೆಯಾಗೆ। ಸಿಂಗಾರಿ ಜಾಣೆ ಲಲ್ಲಾರಿ ಜಾಣೆ। ಬಾರೆ ನನ್ನ ಜೊತೆಯಾಗೆ। ಧೀಂ ಹತ್ತ ಹತ್ತ ದಿನ್ನಾ ಧೀಂ... ।।3।। ಬೆಳ್ಳಿ ಗೆಜ್ಜೆ ತೊಡುವೋಳಲ್ಲ। ಬರಿಕಾಲಲ್ಲಿರೊವೊಳಲ್ಲ। ಇರುವೊಳಲ್ಲ ಮನೆಯೊಳಗೆ। ಸಿಂಗಾರಿ ಜಾಣೆ ಇರುವೊಳಲ್ಲ ಮನೆಯೊಳಗೆ। ಲಲ್ಲಾರಿ ಜಾಣೆ ಇರುವೊಳಲ್ಲ ಮನೆಯೊಳಗೆ। ಧೀಂ... ಹತ್ತ ಹತ್ತ ದಿನ್ನಾ ಧೀಂ...।।4।। ಪಟ್ಟೆಸೀರೆ ರಾಟೆವಾಲೆ। ಮುತ್ತಿನ ವಡ್ಯಾಣದೋಳೆ। ಬಾರೆ ನನ್ನ ಜೊತೆಯಾಗೆ ಸಿಂಗಾರಿಜಾಣೆ। ಬಾರೆ ನನ್ನ ಜೊತೆಯಾಗೆ। ಲಲ್ಲಾರಿ ಜಾಣೆ। ಬಾರೆ ನನ್ನ ಜೊತೆಯಾಗೆ। ಧೀಂ... ಹತ್ತ ಹತ್ತ ದಿನ್ನಾ। ಧೀಂ...।।5।।

**ಜಾಲಾ ಗೋಪಾಲ ನಿನ್ನ ಬಾಲನೇನೇ** **ರಾಗ: ಆನಂದಭೈರವಿ**

ಜಾಲಾ ಗೋಪಾಲ ನಿನ್ನ ಬಾಲನೇನೇ ಗೋಪಮ್ಮಾ।।ಪ।। ಗೋಪವ್ವ ನೀ ಕೇಳು ಗೋಪೀ ಕಂದಯ್ಯ ಕೇಳು। ಗೋಕುಲದೊಳಗೇ ಇರುವೋನೆ ಗೋಪಮ್ಮಾ।।2 ಸಲ।। ಬಂದೂ ಬಂದೂ ನಮ್ಮ ಕೆಲಸವ ಗೋಪಮ್ಮಾ। ಬಂದು ಬಂದು ನಮ್ಮ ಕೆಲಸಾ ಕೆಡಿಸ್ತಾನೆ।। ಕಂದಾ ಗೋವಿಂದನಾ ಕರಕಳ್ಳೆ ಗೋಪಮ್ಮಾ। ಬಾಲ ಗೋಪಾಲನಾ ಕರಕಳ್ಳೆ ಗೋಪಮ್ಮಾ। ಜಾಲ ಗೋಪಾಲನಾ ಕರಕಳ್ಳೆ ಗೋಪಮ್ಮಾ।।1।। ಹಾಲು ಮಾರ್ತ ಬಂದಳಣ್ಣ ನೀಲೀ ನಾಮದ್ ಗೊಲ್ಲಾರ್ಹುಡುಗೀ। ಹಾಲು ಮಾರ್ದ ಸುಂಕ ಕೇಳಿದ್ರೆ ನೀಲಿ ನಾಮಾ ತೋರ್‍ಯಾಳೇ।।2।। ಮೊಸರು ಮಾರ್ತ ಬಂದಳಣ್ಣ ಹಸುರು ಕಡ್ಡದ್ ಗೊಲ್ಲರ್‍ಹುಡುಗಿ। ಮೊಸರು ಮಾರ್ದ ಸುಂಕ ಕೇಳಿದ್ರೆ ಹಸುರು ಕಡಗಾ ತೋರ್‍ಯಾಳೆ।।3। ಬೆಣ್ಣೆ ಮಾರ್ತ ಬಂದಳಣ್ಣ ಸಣ್ಣ ನಾಮದ ಗೊಲ್ಲರ್‍ಹುಡುಗೀ। ಬೆಣ್ಣೆ ಮಾರ್ದ ಸುಂಕ ಕೇಳಿದ್ರೆ ಸಣ್ಣ ನಾಮ ತೋರ್‍ಯಾಳೇ।।4।। ಆನೆಯನೇರಿಕೊಂಡು ನವರಂಗನಾಡುತ। ಆನೆಯನವನೇರಿ ಬಂದನೇನೇ ಗೋಪಮ್ಮಾ।।5।। ಒಂಟೆಯನೇರಿಕೊಂಡು ನಾಂಟ್ಯವನಾಡುತ। ಒಂಟೆಯನವನೇರಿ ಬಂದನೇನೇ ಗೋಪಮ್ಮಾ।।6।। ಕುದುರೆಯನವನೇರಿ ಚದುರಂಗವಾಡುತ। ಕುದುರೆಯನವನೇರಿ ಬಂದನೇನೇ ಗೋಪಮ್ಮ।।7।।

**ಜೋಗಿ ಜಂಗಮರೆ ಹೋಗಿ** **ರಾಗ: ಸೌಖ್ಯದಾಯಿನಿ**

ಜೋಗಿ ಜಂಗಮರೆ ಹೋಗಿ ನನ ತವರೀಗೆ। ಸಣ್ಣಕ್ಕಿ ದಾನ ಕೊಡುತಾನ। ಸಣ್ಣಕ್ಕಿ ದಾನ ಕೊಡುತಾನ ನನ ಅಣ್ಣ। ಹೊನ್ನಿನ ದಾನ ಮಾಡ್ತಾನ॥1॥ ನೀರುಳ್ಳಿ ದಾನ ನೀರು ಮಜ್ಜಿಗೆ ದಾನ। ಮತ್ತೆ ಅಂಬಲಿದಾನ ಕೊಡ್ತಾನ॥2 ಸಲ॥ ನನ ಅಣ್ಣ ಅಂಬುಲದ ಮುದ್ದೆ ಕೊಡುತಾನ॥2॥ ಅತ್ತಿಗೆ ಬಸುರಿ ಮನೆ ಮುಂದೆ ಚಪ್ಪರ। ಅನ್ನ ಛತ್ರವ ಇಡಿಸ್ಯಾನಾ॥2 ಸಲ॥ ಅಣ್ಣಯ್ಯ ಮನಿ ಮುಂದೆ ಇಡಿಸ್ಯಾನಾ ಅರವಟ್ಟಿಗೆ॥3॥ ಹಾದಿಯ ಅರಮನೆ ಬೀದೀಯ ಪಡಸಾಲೆ। ಏಳು ಸುತ್ತಿನ ಕಲ್ಲು ಬಾವಿ॥2 ಸಲ॥ ಕಟ್ಟಿಸ್ಯಾನ ಇಡಿಸ್ಯಾನ ತಮ್ಮಯ್ಯ ಅರವಟ್ಟಿಗೆ॥4॥ ಭೀಮ ಧರ್ಮಜರಂಥ ಸೋದರರಿರುವಾರು। ದ್ರೌಪದಿಯಂಥ ಮಡದೀಯು॥2ಸಲ॥ ಸಿಕ್ಕಲಿ ಮನೆ ತುಂಬ ಹೊನ್ನು ಹರಿಯಾಲಿ॥5॥

**ತವರೂರ ಸಿರಿನೋಡ ಬಂದೆ।** **ರಾಗ: ಶಿವರಂಜನಿ**

ತವರೂರ ಸಿರಿನೋಡ ಬಂದೆ। ತಾಯಿ ನೆನಪಾಗಿ ಕಣ್ಣೀರ ತಂದೆ॥ಪ॥ ಹತ್ತು ಹದಿನಾರು ವರುಷಗಳಲ್ಲಿ। ಹೆತ್ತ ತಾಯ್ತಂದೆಯರ ಪ್ರೀತಿಯಲ್ಲಿ। ಮುತ್ತಿನಂತೆ ಜೋಪಾನವಾಗಿ ಬಾಳಿದೆ। ಅದು ಎತ್ತ ಹೋದರು ನೆನಪಾಗಿದೆ॥1॥ ಬಾಗಿಲ ಮುಂದೆ ರಂಗೋಲಿ। ಬಾಗಿ ಇಡುತಿದ್ದೆ ನಾನಾ ತೆರದಲ್ಲಿ। ಅದು ಹೇಗೇ ಮರೆಯಲಿ ಮನಸಲ್ಲಿ। ಅದು ಮರೆಯಲಾಗದು ಬಾಳಿನಲಿ॥2॥ ಅಣ್ಣಾನ ಹೆಂಡತಿ ಕೇಡಿ। ಕಣ್ಣು ಸನ್ನೆಯ ಮಾಡಿದಳೆನ್ನ ನೋಡೀ। ಅಣ್ಣ ಮಾತಾಡಿಸದೆ ಒಳಗೋಡಿದ। ತನ್ನ ಸಿರಿಯಲ್ಲೆ ತಾ ಒಡಗೂಡಿದ॥3॥ ಅತ್ತಿಗೆ ಕೈಗೊಂಬೆ ಅಣ್ಣ। ಎತ್ತಿ ಆಡಿಸಿದ ತಂಗೀಯ ಮರೆತ। ಅಣ್ಣ ಕಣ್ಣೆತ್ತಿ ಸಹ ನೋಡಬಾರದೆ। ತಂಗಿ ಬಾರಮ್ಮ ಇತ್ತ ಎನಬಾರದೆ॥4॥ ಶಿವನೇ ಕೈ ಮುಗಿದು ನಾ ಬೇಡುವೆ। ತವರ ಸಿರಿ ಬೆಳೆದು ಬರಲಿ ನಮ್ಮಣ್ಣಗೆ। ಸುಖ ಸಂಪತ್ತು ಕೊಡು ನಮ್ಮಣ್ಣಗೆ। ಕಾಯಿ ಕರ್ಪೂರ ಬೆಳಗುವೆ ನಿನಗೆ॥5॥

**ತಾಯಮ್ಮ ಎಂಬುವಳು** **ರಾಗ: ಸಾವೇರಿ**

ತಾಯಮ್ಮ ಎಂಬುವಳು ದೇವ ಲೋಕದ ಮನಸಿ। ಕಾಲು ಸೋಕಿದರೆ ಕರ್ಮವು। ತಾಯಮ್ನ ಕಾಶಿಗ್ಹೋದರು ಕಳೆಯಾದು॥1॥ ತವರೂರು ಎಂಬುವರು ಅವರ್ಯಾರಿಗೆ ಕಮ್ಮಿ। ತವರಲ್ಲಿ ತೆಂಗು ಬೆಳೆವೋರು। ಅಣ್ಣಯ್ಯ। ಅವರೊಂದು ಪಟ್ಟಾದ ದೊರೆಗೋಳು॥2॥ ತವರು ಮನೆಯ ದೀಪ ತೆವರೇರಿ ನೋಡೇನು। ಹತ್ತು ಬಳ್ಳಾ ಹೆಚ್ಚಿ ಶರಣೆಂದು। ತಮ್ಮದಿರು ಜಯವಂತರಾಗಿ ಇರಲೆಂದು॥3॥ ಹಾಲುಂಡ ತವರಿಗೆ ಏನೆಂದು ಹಾಡಾಲಿ। ಹೊಳೆಯ ದಂಡೇಲಿರುವ ಗರಿಕೆಯಾ। ಕುಡಿಹಂಗೆ ಹಬ್ಬಲಿ ಅವರ ರಸಬಳ್ಳಿ॥4॥

**ತಾಯಿ ಸತ್ತಮೇಲೆ ತವರಿಗೆ** **ರಾಗ: ಶುಭಪಂತುವರಾಳಿ**

ತಾಯಿ ಸತ್ತಮೇಲೆ ತವರಿಗೆ ಎಂದೂ ಹೋಗಬಾರದವ್ವ। ನಾಯಿಗಿಂತ ಕಡೆಯಾಗಿ ಹೋಯಿತು ನನ್ನ ಬಾಳು ಕೇಳವ್ವ॥ಪ॥ ಬಹಳ ಮಕ್ಕಳ ಬಡತನ ಸಂಸಾರ ನನ್ನ ನಸುಕಿನಾಗ। ಬರೆದು ಕಳಿಸಿದನು ಏನು ಮಾಡಲಿ ಕರುಣೆಯಿಲ್ಲ ಶಿವಗ॥1॥ ಬಗಲಾಗ ಒಂದು ಕೈಯಾಗ ಒಂದು ಕೂಸಿನ ಕೂಡಿಕೊಂಡು। ಹರದಾರಿಯತ್ತ ಉಸಿರು ಹಾಯುತ್ತ ಬಂದಿದ್ದೆ ನಡಕೊಂಡು। ತೌರಿನ ಹೊಸ್ತಿಲ ತುಳಿಯುವುದರಾಗ ಅಣ್ಣನ ಹೆಂಡತಿಯು। ಕಂಡರು ಕಾಣಿಸದ್ಹಾಂಗ ಹೋದಳು ಕರೆವರು ಗತಿ ಇಲ್ಲ॥2॥ ನೆತ್ತಿ ಮೇಲೆ ಬಿಸಿಲು ಬಂದಿತ್ತು ಮಕ್ಕಳು ಚಡಪಡಿಸಿ ನೀರಿಗಾಗಿ। ಕಣ್ಣೀರು ಹಾಕುತ ಅತ್ತಾವ ಪುಟಿಪುಟಿಸಿ। ಹುಟ್ಟಿ ಬೆಳೆದ ನನ್ನ ತೌರಲ್ಲೀಗ ನೀರಿಗೂ ಗತಿಯಿಲ್ಲ। ಬಾ ನನ್ನ ತಂಗಿ ಯಾವಾಗ ಬಂದಿಯಂತ ಕರೆಯುವ ಕರುಳಿಲ್ಲ॥3॥ ಹೊಲಕ್ಕೆ ಹೋಗಿದ್ದ ಅಣ್ಣಯ್ಯ ಆಗ ಮನಿಗೆ ಬಂದಿದ್ದ। ದಿಕ್ಕು ಇಲ್ಲದ ತಂಗೀಯ ನೋಡಿ ಬಿಡದೆ ಅವ ಕರೆದ। ಮನಸಿನೊಳಗೆ ಕಾಲಿಡ ಬೇಡೆಂದರೂ ಹಸಿದ ಮಕ್ಕಳ ನೋಡಿ। ಒಲ್ಲದ ಮನಸಲಿ ಒಳಗೆ ಹೋದೆನು ಅಣ್ಣನ ಜೊತೆಗೂಡಿ॥4॥

**ತಾವರೆಯ ಗಿಡಹುಟ್ಟಿ ದೇವರಿಗೆ ನೆರಳಾಗಿ** **ರಾಗ: ಸಾವೇರಿ**

ತಾವರೆಯ ಗಿಡಹುಟ್ಟಿ ದೇವರಿಗೆ ನೆರಳಾಗಿ। ನಾ ಹುಟ್ಟಿ ಮನೆಗೆ ಎರವಾದೆ।।2ಸಲ।। ಹಡೆದವ್ವ। ನೀ ಕೊಟ್ಟ ಮನೆಗೆ ಹೆಸರಾದೆ।।1।। ಬ್ಯಾಸಗಿ ದಿವಸಕ ಬೇವಿನ ಮರ ತಂಪು। ಭೀಮರತಿ ಎಂಬ ಹೊಳಿ ತಂಪು।।2ಸಲ।। ಹಡೆದವ್ವ ನೀ ತಂಪು ನನ್ನ ತವರೀಗೆ।।2।। ಹೆಣ್ಣು ಹಡೆಯಲಿ ಬ್ಯಾಡ ಹೆರವರಿಗೆ ಕೊಡಬ್ಯಾಡ। ಹೆಣ್ಣು ಹೋಗಾಗ ಅಳಬ್ಯಾಡ।। ಹಡೆದವ್ವ ಸಿಟ್ಟಾಗಿ ಶಿವನ ಬೈಬೇಡ।।3।। ಗಂಜಿಯ ಕುಡಿದರು ಗಂಡನ ಮನೆ ಲೇಸು। ಅಂದಣದಮ್ಯಾಲಾ ಚವುರಾವ।।2ಸಲ।। ಸಾರಿದರ ಹಂಗಿನ ತವರ ಮನಿ ಸಾಕ।। ತಾಯ ಮಕ್ಕಳ ದನಿಯು ತಾಳ ಬಾರಿಸಿದಂಗ। ಜೋಡಿ ಕಿನ್ನುರಿ ನುಡಿದ್ಹಾಂಗ।।2ಸಲ।। ಹಳಸಂಗಿ ಹೊತ್ತೇರಿತಾಸೆ ಬಡಿದಂಗ।। ತಾಯಿಲ್ದ ತವರಿಗೆ ಹೋಗದಿರು ನನ ಮನವೆ। ನೀರಿಲ್ದ ಕೆರೆಗೆ ಕರಬಂದು ತಿರುಗಾಡಾಗ। ನೋಡಿದರಾ ದುಃಖ ಬರ್ತಾದ।। ಕಣ್ಣೀಗೆ ಕಪ್ಪಾಸೆ ಬಣ್ಣಕ್ಕೆ ಸೆರಗಾಸೆ। ಹೆಣ್ಣು ಮಕ್ಕಳಿಗೆ ತವರಾಸೆ। ತಾಯವ್ವ ನಿನ್ನದೆ ನಮಗೆ ಅನುಗಾಲ।। ತಂದೀಯ ನೆನೆದರೆ ತಂಗಳು ಬಿಸಿಯಾಯ್ತು। ಗಂಗಾದೇವಿ ನನ್ನ ಹಡೆದವ್ನ। ನೆನೆದರೆ ಮಾಸಿದ ತಲೆಯು ಮಡಿಯಾಯ್ತು।।

**ತೌರೂರ ದಾರಿಯಲ್ಲಿ ಕಲ್ಲಿಲ್ಲ** **ರಾಗ: ಶಿವರಂಜನಿ**

ತೌರೂರ ದಾರಿಯಲ್ಲಿ ಕಲ್ಲಿಲ್ಲ ಮುಳ್ಳಿಲ್ಲ। ಸಾಸಿವೆಯಷ್ಟು ಮರಳಿಲ್ಲ।।2ಸಲ।। ಬಾನಿನಲಿ ಬಿಸಿಲಿನ ಬೇಗೆ ಸುಡಲಿಲ್ಲ।। ನೀರ ಮೇಲೆ ನೀರು ನೀರಾಚೆ ತಾವರೆ। ತಾವರೆಯಾಚೆ ತವರೂರಿಗ್ಹೋದರೆ। ಹಿಂದಿರುಗಿ ಬರಲು ಮನಸ್ಸಿಲ್ಲ।। ಒಬ್ಬಳಿರುವ ಮನೆಗೆ ಹಬ್ಬದಿರು ಮಲ್ಲಿಗೆ। ಒಬ್ಬಳೆ ಕುಯ್ದು ಮುಡಿಲಾರೆ। ಮಲ್ಲೀಗೆ ಹಬ್ಹೋಗು ನನ್ನ ತವರೀಗೆ।। ತಾಯಿ ಮನೆ ಊಟ ತೋಳಮೇಲಿನ ನಿದ್ರೆಗಾವೆ। ಮಲ್ನಾಡ ಅರಿಷಿಣ ತೆನೆಯಂಗೆ। ನಾನಿದ್ದೆ। ನಮ್ಮವ್ವನ ಮನೆಯಾಗೆ।। ತಾಯಿ ಇದ್ದರೆ ಭೋಗ ತಂದೆ ಇದ್ದರೆ ಭೋಗ। ನೀರಿದ್ರೆ ಬಾಳೆ ಗೊನೆ ಭೋಗ। ತಾಯವ್ವ। ನೀ ಇದ್ರೆ ನಮಗ ಐಭೋಗ।।

**ತಿಂಗಾಳು ಮುಳುಗಿದವೋ** **ರಾಗ:ಮೋಹನ**

ತಿಂಗಾಳು ಮುಳುಗಿದವೋ ರಂಗೋಲಿ ಬೆಳಗಿದವೋ। ತಾಯಿ ಯಲ್ಲವ್ವನ ಪೂಜೆಗೆಂದು ಬಾಳೆಯು ಬಾಗಿದವೊ।।ಪ।। ಅರಿಶಿನ ಸೀರೆಯುಟ್ಟು ನಲಿಯೋಳು ಯಲ್ಲವ್ವ। ನಲಿನಲಿ ನೀ ಎಂದು ನಲಿಯುವ ತಾಯಿಗೆ ಬಾಳೆ ಬಾಗಿದವೊ।।1।। ತಮಟೆಯ ಸದ್ದು ಕೇಳಿ ನಲಿಯೋಳು ಯಲ್ಲವ್ವ। ಪಟ್ಟಕ್ಕೆ ಕುಳ್ಳಿರಿಸೆ ಕಂಕಣ ತೊಡಿಸಿ ಬಾಳೆ ಬಾಗಿದವೊ।।2।। ತಾಯಿಯಲ್ಲವ್ವನಿಗೆ ತುಪ್ಪದಾರತಿ ಹಚ್ಚಿ। ತಂಬಿಟ್ನ ಸೇವೆ ಮಾಡುವಾಗ। ಬಾಳೆ ಬಾಗಿದವೋ।।3।। ಕೊಂಡಕ್ಕೆ ಹೊರಡಾಲು ಬೇವಿನ ಗಾಳಿ ಬೀಸುವಾರು। ವಾಲಾಡಿ ನೀ ಬೀಗುತ್ತ ಬರುವಾಗ ಬಾಳೆ ಬಾಗಿದವೋ।।4।।

**ದೂರದ ಬೆಟ್ಟದ ನೀರನು** **ರಾಗ:ಹಂಸಧ್ವನಿ**

ತಂದಾನಿ ತಾನೋ ತಾನಾನಿ ತಾನೋ ತಂದಾನಿ ತಾನೋ ತಾನ ತಂದಾನನೋ। ದೂರದ ಬೆಟ್ಟದ ನೀರನು ಕಟ್ಟಿ ಕೆರೆಯನು ತುಂಬ್ಯಾರೆ। ನೀರನು ಹಾಯ್ಸಿ ಹುಲುಸಾಗಿ ಪೈರು ಪಚ್ಚೆಯ ಬೆಳೆಸ್ಯಾರೆ।।ಪ।। ಬೆಳೆದಾವು ಸುತ್ತಲು ಕಬ್ಬಿನ ತೋಟ। ಮೆರ್ದಾವೆ ನಿಂತು ವೀಳ್ಯೆಯ ತೋಟ। ಚಿಲಿಪಿಲಿ ಹಾಡ್ಯಾವು ಹಕ್ಕಿಯ ಕೂಟ। ಹುರುಪನು ತಂದಿದೆ ಆ ನೋಟ।।1।। ಸುರಿದಾರೆ ಕಾಲಕ್ಕೆ ಮುಂಗಾರು ಮಳೆಯು। ಹರಿದಾರೆ ಹರುಷದಿ ಹೊನ್ನಿನ ಹೊಳೆಯು। ಬೆಳೆದಾವು ಬೆಡಗಿನ ಬೆಳ್ಳಿಯ ಬೆಳೆಯು। ತರುವುದು ಜನಕೆಲ್ಲ ರನ್ನದ ಕಳೆಯು।।2।। ತುಂಬಿ ತುಳುಕುವ ಕೆರೆಯನು ನೋಡಿ। ಹಿಗ್ಗಿದರೆಲ್ಲರು ನಲಿನಲಿದಾಡಿ। ನಿರತವು ಎಮ್ಮನು ಕಾಪಾಡೆಂದು। ಪೂಜೆಯಗೈದರು ತಾವ್‌ಬೇಡಿ।।3।।

**ನಮ್ಮೂರ ದಾರಿಯಲಿ** **ರಾಗ: ಶಿವರಂಜನಿ**

ಸಾ ಸಾ ನಿ ಸನಿದಾನಿ ದಾಪಾಮ ಮಪದಾಪ। ಸಾ ಸಾ ನಿ ದನಿದಾನಿ ಸಾ ಸಾ ಸಾ।। ನಮ್ಮೂರ ದಾರಿಯಲಿ ಕಲ್ಲಿಲ್ಲ

ಮುಳ್ಳಿಲ್ಲ। ಹಸಿರೆಂಬ ಜರತಾರಿ ಮಕಮಲ್ಲು। ಮಕಮಲ್ಲು ಮೇಲ್ಮ ಳೆಯ ಹಿಮಮಣಿಯ ನವರತುನ। ಬೆಳಗೀನ ಎಳೆಮಗುವ ರಸಜೊಲ್ಲು।।ಪ।। ತಾಳೆಬಾಳೆಯ ತೋಟ ತೆಂಗು ಮಾವಿನ ತೋಟ। ಶೃಂಗಾರವಾದ ಹೂದೋಟ (2 ಸಾರಿ) ದೊಳಗೆಲ್ಲ। ಬಂಗಾರದಂತ ಜೇನಾಟ(2ಸಾರಿ) ।।1।। ಕೆರೆತುಂಬಿ ಹರಿದಾವು ಹೊಳೆ ತುಂಬಿ ಹರಿದಾವು। ಕೆರೆ ಕೆರೆಯ ತೆರೆಯಲ್ಲಿ ಜಯಗೀತೆಯನು(2ಸಾರಿ) ಕಂಡು। ಮುತ್ತಿಕ್ಕಿ ನಗುತಾಳೆ ಭೂಮಾತೆ।।2।।

## ನಮ್ಮೂರ ದಾರೀಲಿ ರಂಗೋಲಿ

ನಮ್ಮೂರ ದಾರೀಲಿ ರಂಗೋಲಿ ಬರೆದವ್ರೆ ಹೊನ್ನ ಹೊಂಬಾಳೆ ಹುಡಿ ಚೆಲ್ಲಿ। ಹೊನ್ನ ಹೊಂಬಾಳೆ ಹುಡಿ ಚೆಲ್ಲಿ ಮುಡಿದವ್ವೆ। ಮುಳ್ಳೀನ ಬೇಲಿ ಕುಡಿ ಬಾಳೆ।। ಬನದಮ್ಮ ಹೊಸದಾಗಿ ಹಸುರುಟ್ಟು ನಿಂತಾಳೆ। ಮೂಡಾಲ ಹಸೆಯಾ ಮಣೆ ಏರಿ। ಮೂಡಾಲ ಹಸೆಯಾ ಮಣೆ ಏರಿ ಕಾದೌಳೆ। ಹೆಸರ್ಧೇಳೊ ಅರಸಾರು ಬರಲೆಂದು।। ಮಾವು ಬೇವಿನ ಹೂವು ಜೋಮಾಲೆ ಜೀಕ್ಯಾವೆ। ಜೇನು ಜೋಗುಳವ ಹಾಡ್ಯಾವೆ। ಜೇನು ಜೋಗುಳವ ಹಾಡೂವ ಹೊತ್ತೀಗೆ। ಗಿಣಿರಾಮ ಕಣಿಯಾ ಹೇಳ್ಯಾನೆ।। ಸುಗ್ಗೀಯು ಬಂತು ಹಿಗ್ಗಾನೆ ತಂತು। ನುಗ್ಗೀತು ನಮ್ಮೂರ ಕೇರ್‍ಯಾಗೆ। ನಮ್ಮೂರ ಕೇರಿ ತೋರಣ ತೆರೆದಾವೆ। ಹೂರಣ ಹೋಳಿಗೆ ಘಮ ಘಮ।।

## ನಾನು ಬತ್ತೀನ್ ಜಾತ್ರೆಗೆ

ನಾನು ಬತ್ತೀನ್ ಜಾತ್ರೆಗೆ ಜಾತ್ರೆಲಿಂಗನ್ ತೇರಿಗೆ ।।3ಸಲ।।ಪ।। ಕುಳ್ಳೀನ್ ಕರ್‍ಕೊಂಡು ಹುಳ್ಳೀನ್ ಹುರ್‍ಕೊಂಡು। ಲುಂಗೀನ್ ಉಟ್ಕೊಂಡು ನೀಂಗಿನ್ ಕರ್‍ಕೊಂಡು।।1।। ಬಂಡೀಏರೋಣ್ ಹಿಂಡ್ಹಿಡು। ಹೋಗೋಣ ಜಾತ್ರೆಗೆ।।2।। ಬುತ್ತಿಯ ತಿನ್ನೋಣ ನೀರನ್ನು ಕುಡಿಯೋಣ। ಆನೇಯ ಏರೋಣ ಜಾತ್ರೇಯ ಸುತ್ತೋಣ।।3।। ಕಳ್ಳೆಪುರಿ ಕೊಳ್ಳೋಣ ಬತ್ತಾಸನ್ನು ತಿನ್ನೋಣ। ಹಣ್ಣುಜವ್ನ ಎಸೆಯೋಣ ರಥವನ್ನು ಎಳೆಯೋಣ।।4।।

## ನಿಂಬೀಯಾ ಬನಾದ ಮ್ಯಾಗಳ

ರಾಗ: ಶಿವರಂಜನಿ

ನಿಂಬೀಯಾ ಬನಾದ ಮ್ಯಾಗಳ ಚಂದ್ರಮಾ ಚೆಂಡಾಡಿದ। ಎದ್ದೋನೇ ನಿಮಗ್ಯಾನ ಏಳುತಲೀ ನಿಮಗ್ಯಾನ। ಸಿದ್ದಾರ್ಧ ಗ್ಯಾನ ಶಿವಗ್ಯಾನ ।।1।। ಸಿದ್ಧಾರ್ಧ ಶಿವಗ್ಯಾನ ಶಿವಗ್ಯಾನ ಮಾ ಶಿವನೇ। ನಿದ್ರೆಗಣ್ಣಾಗೆ ನಿಮ್ಮಗ್ಯಾನ ।।2।।ದಾರೀಲಿ ಮಾವಿನ ಬೇರಾಗೆ ಇರುವೋಳೆ। ಓಲ್ಗಾದ ಸದ್ದಿಗೆ ಒದಗೋಳೆ ।।3।। ಓಲ್ಗಾದ ಸದ್ದಿಗೆ ಒದಗೋಳೆ ಸರಸತಿಯೆ। ನಮ್ ನಾಲಿಗೆ ತೊಡರ ಬಿಡಿಸವ್ವಾ।।4।। ಏಳೆಲೇ ಮಾವಿನ ತಳಿರಿನಲ್ಲಿರುವೋಳೆ। ತಾಳದ ಜೊತೆಗೆ ನಲಿಯೋಳೆ ।।5।। ತಾಳದ ಜೊತೆಗೆ ನಲಿಯೋಳೆ ಸರಸೋತಿ। ನಾಲಿಗೇಲಿ ಅಕ್ಷರವ ನಿಲಿಸವ್ವ।।6।। ಎಂಟೆಲೇ ಮಾವಿನ ದಂಟಾಗೆ ಇರುವೋಳೆ। ಗಂಟೆ ಸದ್ದೀಗೆ ಒದಗೋಳೆ।।7।। ಗಂಟೆಯಾ ಸದ್ದೀಗೆ ಒದಗೋಳೆ ಸರಸತಿಯೇ। ನಮ್ಮ ಗಂಟಾಲ ತೊಡರಾ ಬಿಡಿಸವ್ವ।।8।। ಹಟ್ಟೀಯಾ ಮನೆಯೋಳೆ ಪಟ್ಟೆದುಂಗುರದೋಳೆ। ಪಟ್ಟೇಯ ಸೀರೆ ನೆರಿಯೋಳೆ।।9।। ಸರಸೋತಿ ಗುಟ್ಟಿನಾಗೆ ಮತಿಯಲಿ ನೆಲಸವ್ವ।। ಹಾದಿಯ ಮನೆಯೋಳೆ ಪಾದದುಂಗುರದೋಳೆ। ಸರಸೋತಿ ಬೋಧಿಸು ನಲ್ನುಡಿಯ।।10।।

## ಬಂಗಾರ ಯಾತಕ ಮೈಮ್ಯಾಗ

ರಾಗ: ಆನಂದಭೈರವಿ

ಬಂಗಾರ ಯಾತಕ ಮೈಮ್ಯಾಗ। ನಮ್ಗೆ ಜೀವನ ಮಾಡಲು ಜಗದಾಗ। ಬಂಗಾರ ಎಂಬುದು ಸ್ಥಿರವಲ್ಲ। ನಾವು ಅದಕ್ಕಾಗಿ ಚಿಂತಿಸಿ ಫಲವಿಲ್ಲ।।ಪ।। ಗುಣವೊಂದು ಇದ್ದರೆ ಹಸನಾಗಿ। ಹೇಳು ಏನೈತೆ ಅದಕೂ ಮಿಗಿಲಾಗಿ। ತಿಳಿಯಾದ ಮನಸೆ ಆಭರಣ। ನೋಡು ಅದಕ್ಕಾಗಿ ಇರುವುದೇ ಕಲ್ಯಾಣ।।1।। ನಾವೆಲ್ಲ ಇರುವುದೆ ಮೂರೇ ದಿನ। ಹೇಳು ನಮಗ್ಯಾಕೆ ಇಲ್ಲದ ಮರುಳುತನ। ಇರುವಾಗ ಜನರಿಗೆ ಬೇಕಾಗಿ ನಾವು ಇರಬೇಕು ಮರದ ನೆರಳಾಗಿ।।2।। ಸತ್ಯಕ್ಕೆ ಎಂದಿಗೂ ಸಾವಿಲ್ಲ।

ಹೇಳು ಮತ್ತೊಂದು ಮಾತಿಗೆ ಬೆಲೆ ಇಲ್ಲ। ನಾವೆಲ್ಲ ಮರೆತರೆ ಮರೆಮೋಸ। ನೋಡು ಮ್ಯಾಗಿಂದ ಇಳಿವುದು ಕೈಲಾಸ॥3॥ ಹಸಿವೀಗೆ ಹಾಲ್ಕೊಟ್ಟು ಶಿಶುವೀಗೆ ಬೆಣ್ಣೆ ಕೊಟ್ಟು ಬಿಸಿಲೀಗಿ ನಿಂತವರ ನೆರಳೀಗಿ ಕರೆದರ ಅಸವಲ್ಲದ ಪುಣ್ಯ ಮಗನೀಗಿ॥4॥

**ಬೀದಿಯಲಿ ಬರ್ತಾಔನೆ** **ರಾಗ: ಮೋಹನ**

ಬೀದಿಯಲಿ ಬರ್ತಾಔನೆ ಹೊಸಕೇರಿ ಗಂಡು। ಮಲ್ಲಿಗೆಯರಳಿ ಮುಡಿದಿದ್ದವಳ ಕೈಯ್ಯಾ ಹಿಡಕೊಂಡು॥ ರಂಗವಲ್ಲಿ ಇಟ್ಟಹಾಂಗ ಹಣೆಯಾ ಮೇಲ್ ಗಂಧ। ಬಾಗಿಲಿಗಿಟ್ಟ ಕೆಂಪೀನಾಂಗ ತುಟಿಯಾ ಮೇಲ್ ಚೆಂದ....ಓ॥1॥ ಓರೆ ಕಚ್ಚಿ ನಿರಿಗೆ ಹಚ್ಚಿ ತೀಡಿದ ಜರತಾರೀ। ಓರೆ ನೋಟದ ಕೋರೇ ಪೇಟದ ನವಿಲಾಕಣ್‌ಜರಿ। ನೀಲಿ ಬಾನಲಿ ಮಿರುಗಿದ್ದಾಂಗ ಕರ್ಣಕುಂಡಲ। ಗಂಗೇ ಯಮುನೆ ಸೇರಿದ್ದಾಂಗ ಜೋಡುಮಂಡಲ॥2॥ ಸೊಂಟಕ್ಕಿಟ್ಟ ಪಟ್ಟಿಯಂತೆ ಬೆಳ್ಳಿಯ ಉಡುದಾರ। ಕೃಷ್ಣವರ್ಣದ ತಾರೆಯಂತೆ ಕೊರಳಲಿ ಮಣಿಹಾರ॥ ಎರೆಯಾ ನೆಲದಿ ಹೂ ಬಿಟ್ಟಂತೆ ಬೆರಳ ಮುದ್ರಿಕೆ। ಬಿಳಿಯಾ ಕಂಕಣ ಮಿಂಚೆಸೆದಂತಿದೆ ಕರಿಯಾ ಮುಂಕೈಗೆ। ಬಾವಿಗಿಳಿದ ಬೇಟೆಯಂತೆ ಜೋತ ಜನಿವಾರ। ತಾವನುಳಿದ ಸ್ಥಾವರದಂತೆ ನಡೆದಿದೆ ಆಕಾರ॥3॥ ಎತ್ತುವ ಕಾಲಿಗೆ ಒತ್ತಿ ಹಿಡಿದಿದೆ ಗಿರ್ಕಿ ಛಡಾವು। ಕಪ್ಪು ಮೈಯಿಗೆ ಒಪ್ಪಿನಿಂತಿದೆ ಬಿಳಿಯಾ ಕಿಂಕಾಪು। ಕತ್ತು ಕದಲದೆ ಎತ್ತಿ ನಡೆಯುವ ರಾಜಗಂಭೀರ। ಇತ್ತರೇತಕೆ ಅಬಲೆ ಎನ್ನುವ ನಲ್ಲಳಮನಸಾರ॥4॥

**ಭತ್ತಾ ಕುಟ್ಟುವೆ ಭತ್ತ** **ರಾಗ: ಖರಹರಪ್ರಿಯ**

ಭತ್ತಾ ಕುಟ್ಟುವೆ ಭತ್ತ। ಆ ...... ಹೂಂ.......॥2ಸಾರಿ॥ ಪೈರನ್ನು ನಾಟುವ ನಾವು। ನೀರನ್ನು ಎರಚುವ ನಾವು। ಬಾರಿ ಬಾರಿ ಭತ್ತವ ಬೆಳೆದು ಲೋಕಕ್ಕೆ ಸೇವೆಯ ಮಾಡುವ ನಾವು॥1॥ ಹಳ್ಳಿಯ ರೈತರು ನಾವು। ದಿಲ್ಲಿಯ ಸುಖವನ್ನು ಬಿಟ್ಟು। ಬಾರಿಬಾರಿ ಭತ್ತವ ಬೆಳೆದು। ಲೋಕಕ್ಕೆ ಸೇವೆಯ ಮಾಡುವ ನಾವು॥2॥

**ಮದುವೆಯ ದಿನ ಬಂತು** **ರಾಗ: ಶುದ್ಧಧನ್ಯಾಸಿ**

ಮದುವೆಯ ದಿನ ಬಂತು ನನ ತಂಗಿ ಬರಲಿಲ್ಲಾ। ತಂಗಿಯ ಎದುರಲಿ ತಾಳಿಯ ಕಟ್ಟುವ ಭಾಗ್ಯ ನನಗಿಲ್ಲ॥ಪ॥ ಅಪ್ಪ ಅಮ್ಮ ಸತ್ತ ಮ್ಯಾಲೆ। ತಂಗಿಯ ಹೊರೆಯು ನನಮ್ಯಾಲೆ। ಕೂಲಿಯ ನಾಲಿಯ ಮಾಡಿ ತಂಗಿಯಾ....। ಶ್ರೀಮಂತನ ಮಡದಿ ಮಾಡಿದ್ದೆ॥1॥ ಮದುವೆಗೆ ಕರೆಯಲು ಹೋಗಿದ್ದೆ। ಮಳೆಯಾಗೆ ಹೊರಗಡೆ ನಿಂತಿದ್ದೆ । ನನ್ನನ್ನು ಒಳಗೆ ಕರೆಯದೆಯೇ....। ಬಾಗಿಲು ಜಡಿದಳು ನನ್ನಾಣೆ॥2॥ ಸಿರಿತನದಾಗೆ ಮೆರೆದ್ಯೋಳೆ। ಅಣ್ಣನ ಅಸಡ್ಡಿ ಮಾಡ್ದೋಳೆ। ತುತ್ತು ಉಣಿಸಿ ಬೆಳಿಸಿದ ಅಣ್ಣನ ಮರೆತು ಬಿಟ್ಟಾಳೇ॥3॥

**ಮಾನೌಮಿ ಹಬ್ಬಕ್ಕೆ ಮಾದುರ್ಗಿ** **ರಾಗ: ಪುನ್ನಾಗವರಾಳಿ**

ಮಾನೌಮಿ ಹಬ್ಬಕ್ಕೆ ಮಾದುರ್ಗಿ ಪೂಜೆಗೆ। ಮರ್ಯಾದೆಯಿಂದಲಿ ಕರೆತನ್ನಿ। ಈಗಲೆ ಕರೆತನ್ನಿ ಗೌರಿಯ ಗಿರಿರಾಯ। ಈಗಲೇ ಕರೆತನ್ನಿ ಗೌರಿಯ ॥ಪ॥ ಒಬ್ಬಳೆ ಕಂದಮ್ಮ ಹಬ್ಬವು ಹಿರಿದು। ತಬ್ಬಲಿ ಮಾಡುವುದ್ಯ್ಹಾಂಗ....॥ ಈಗಲೇ ಕರೆತನ್ನಿ ಗೌರಿಯ ಗಿರಿರಾಯ(2ಸಾರಿ)॥1॥ ಅರಿಸಿನ ಕುಂಕುಮ ಕಸ್ತೂರಿಜಾಜಿ। ಮಲ್ಲಿಗೆ ಹೂವಿಂದ ಪೂಜಿಸೆ। ಈಗಲೇ ಕರೆತನ್ನಿ ಗೌರಿಯ ಗಿರಿರಾಯ।2ಸಾರಿ॥2॥ ಅತ್ತಿಲ್ಲ ಮಾವಿಲ್ಲ ತೊತ್ತಿನ ನೆರವಿಲ್ಲ। ಎತ್ತು ದುಡಿದ್ದಾಂಗ ದುಡೀತಾಳಾ ಈಗಲೇ ಕರೆತನ್ನಿ ಗೌರಿಯ ಗಿರಿರಾಯ॥3॥ ಹೊನ್ನಿನ ಚೆನ್ನಿ ಚಂದಿರ ಚೆಲುವೆ ರನ್ನದ್ವೊಳಪಿನ ಬಾಲೆಯ .... ಈಗಲೇ ಕರೆತನ್ನಿ ಗೌರಿಯ ಗಿರಿರಾಯ(2ಸಾರಿ)॥4॥

**ಮಾತಾಡ್ ಮಾತಾಡು ಮಲ್ಲಿಗೆ (ಸಂಭಾಷಣಾ ಗೀತೆ)** **ರಾಗ: ಸಾವೇರಿ**

ಮಾತಾಡ್ ಮಾತಾಡು ಮಲ್ಲಿಗೆ ಸಂಪಿಗೆ ಶಾವಂತಿಗೇ ಗುಂಪುಳ್ಳ ಕೇದಿಗೇ॥ ಮೊಗ್ಗೇ ಮಾತಾಡು ಮಲ್ಲಿಗೇ॥ಪ॥ ಒಬ್ಬನ್ನ ಕಟ್ಟಿದ್ದೆ ಒಬ್ಬನ್ನ ಬಿಟ್ಟಿದ್ದೆ. ಒಬ್ಬನ್ನ ಕರಕೊಂಡು ಒಳಗ್ಹೋದೆ ಮಲ್ಲಿಗೇ॥ ಯಾರನ್ನು ಕಟ್ಟಿದ್ದೆ? ಯಾರನ್ನ ಬಿಟ್ಟಿದ್ದೆ? ಯಾರನ್ನು

ಕರಕೊಂಡು ಒಳಗ್ಹೋದೇ ಮಲ್ಲಿಗೇ? ಹಸುವನ್ನೆ ಕಟ್ಟಿದ್ದೆ ಕರುವನ್ನೆ ಬಿಟ್ಟಿದ್ದೆ ಹಾಲನ್ನೆ ಕರಕೊಂಡ್ ಒಳಗ್ಹೋದೇ ಮಲ್ಲಿಗೇ।।1।। ಒಬ್ಬನ್ನ ಹಾಕಿದ್ದೆ ಒಬ್ಬನ್ನ ನೂಕಿದ್ದೆ। ಒಬ್ಬನ್ನ ಹಿಡುಕೊಂಡು ಹೋಗುತಿದ್ದೆ ಮಲ್ಲಿಗೇ।। ಯಾರನ್ನು ಹಾಕಿದ್ದೆ? ಯಾರನ್ನುನೂಕಿದ್ದೇ? ಯಾರನ್ನು ಹಿಡುಕೊಂಡು ಹೋಗುತಿದ್ದೇ ಮಲ್ಲಿಗೇ? ಕದವನ್ನು ಹಾಕಿದ್ದೆ ಅಗಣೀಯ ನೂಕಿದ್ದೆ ದೀಪವನ್ಹಿಡಕೊಂಡು ಹೋಗುತಿದ್ದೆ ಮಲ್ಲಿಗೇ।।2।। ಒಬ್ಬನಿಗೆ ಕಾಲ್ಕೊಟ್ಟೆ ಒಬ್ಬನಿಗೆ ಕೈ ಕೊಟ್ಟೆ। ಒಬ್ಬನಿಗೆ ಶಾಲೆಯ ಅಳಕೊಟ್ಟೆ ಮಲ್ಲಿಗೇ।। ಯಾರಿಗೆ ಕಾಲ್ಕೊಟ್ಟೆ? ಯಾರಿಗೆ ಕೈ ಕೊಟ್ಟೆ? ಯಾರಿಗೆ ಶಾಲೆಯ ಅಳಕೊಟ್ಟೆ ಮಲ್ಲಿಗೆ?।। ಅಗಸಾಲ್ಗೆ ಕಾಲ್ಕೊಟ್ಟೆ ಬಳೆಗಾರ್ಗೆ ಕೈಕೊಟ್ಟೆ ಅಗಸನಿಗೆ ಶಾಲೆಯ ಅಳಕೊಟ್ಟೆ ಮಲ್ಲಿಗೇ।।3।। ಒಬ್ಬನ ಮೇಲ್ ಮಲಗಿದೆ। ಒಬ್ಬನ ಮೇಲೊರಗಿದೆ। ಒಬ್ಬನ ನನ ಮೇಲೆ ಎಳಕೊಂಡೆ ಮಲ್ಲಿಗೇ।। ಯಾರ ಮೇಲೆ ಮಲಗಿದೇ? ಯಾರ ಮೇಲೆ ಒರಗಿದೆ? ಯಾರನ್ನ ಮೇಲೇ ಎಳಕೊಂಡೆ ಮಲ್ಲಿಗೇ।। ಹಾಸಿಗೆ ಮೇಲ್ ಮಲಗಿದೆ। ದಿಂಬಿನ ಮೇಲೊರಗಿದೆ। ಕಂಬಳಿಯ ನನ ಮೇಲೆ ಎಳಕೊಂಡೆ ಮಲ್ಲಿಗೇ।।4।। ಒಬ್ಬನ್ನ ಕೂರ್ಸಿದೆ ಒಬ್ಬನ್ನ ನಿಲ್ಸಿದ್ದೆ ಒಬ್ಬನ್ನ ಹಿಡಕೊಂಡು ಜಗ್ಗುತ್ತಿದೆ ಮಲ್ಲಿಗೆ। ಯಾವನ್ನ ಕೂರ್ಸಿದ್ದೆ ಯಾವನ್ನ ನಿಲ್ಸಿದ್ದೆ ಯಾವನ್ನ ಹಿಡಕೊಂಡು ಜಗ್ಗುತ್ತಿದ್ದೇ ಮಲ್ಲಿಗೆ।ಗಡಿಗೇಯ ಕೂರ್ಸಿದ್ದೆ ಕಡಗೋಲ ನಿಲ್ಸಿದ್ದೆ ಹಗ್ಗಾವ ಹಿಡಕೊಂಡು ಜಗ್ಗುತ್ತಿದ್ದೆ ಮಲ್ಲಿಗೇ।।5।।

**ಮೂಗುತಿ ಮುಂಭಾರ ಜಡೆಗಂಟು** **ರಾಗ: ಪುನ್ನಾಗವರಾಳಿ**

ಮೂಗುತಿ ಮುಂಭಾರ ಜಡೆಗಂಟು ಹಿಂಭಾರ। ಕೆನ್ನೇಗೆ ಭಾರ ಹರಳೋಲೆ। ನನ್ನನಲ್ಲೆ ಬೆನ್ನಿಗೆ ಭಾರ ಶಿವದಾರ।।ಓ।। ನಡೆದಾರೆ ನಡುಭಾರ। ಪಟ್ಟೆಯ ನೆರಿಭಾರ। ತೌರಿನ ಹಂಬಲ ಬಲುಭಾರ ನನ್ನನಲ್ಲೆ। ಯಾಕೆನ್ನ ಮೋಜಿನಣ್ಣ ಮರೆತಾನ।।ಹೋಯ್।। ಬಂಗಾರ ಬೆಳೆಯೋರು ತಿಂಗಳ ಹಾದ್ಯೋರು। ನನ್ನ ಕೊಟ್ಟ್ಯಾಕೆ ಮರೆತಾರು। ಮಾವಿನಹಣ್ಣನ್ನುಣ್ಣುವಾಗ ನೆನೆಸ್ಯಾರು। ತೌರೂರ ಹಾದೀಲಿ ಗಿಡವೆಲ್ಲ ಮಲ್ಲಿಗೆ। ಹೂ ಅರಳಿ ಪರಿಮಳ ಘಮ್ಮೆಂದೂ। ನಾ ಕೊಯ್ದು ಗಿಡಕೊಂದು ಹೂವ ಮುಡಿದೇನ।। ಬಂಗಾರ ಬೇಡ ಬಳೆ ಬೇಡ ಅಣ್ಣಯ್ಯ। ಕೊಡಿರೋ ನನಗೊಂದು ಎಮ್ಮೆಯ। ಅಣ್ಣಯ್ಯ ಹೆಸರ್ಹೇಳಿ ಮೊಸರ ಕಡೆದೇನು।। ನೀವೊಪ್ಪಿ ನಿಮ್ಮ ಮಡದ್ಯೊಪ್ಪಿ ಕೊಟ್ಟರೆ ಹೆಸರ್ಹೇಳಿ ಮೊಸರ ಕಡೆದೇನು ಅಣ್ಣಯ್ಯ ನಿಮ್ಮ ದೇವ್ರಿಗೊಂದೀಪ ಉರಿಸೇನು।। ಕೆಂದೆತ್ತು ಕೈಯಲ್ಲಿ ಕೆಂಪಂಗಿ ಮೈಯಲ್ಲಿ। ಚಿನ್ನದ ಬಾವುಲಿ ಕಿವಿಯಲ್ಲಿಇಟ್ಕೊಂಡು ಅಣ್ಣ ಬಂದ ತಂಗೀನ ಕರೆಯೋಕೆ।। ಹೆಣ್ಣೀಗೆ ತೌರೂರು ರಸಬಾಳೆ ಹಣ್ಣಂತೆ, ಮಲೆನಾಡ ತುಡುವೆ ಜೇನಂತೆ ।।2ಸಾರಿ।। ತಾಯಿಯ ಎದೆಹಾಲ ರುಚಿಯ ಸವಿದಂತೆ।। ತೊಟ್ಟೀಲ ಹೊತ್ಕೊಂಡು ತೌರ್ಬಣ್ಣ ಉಟ್ಕೊಂಡು ಅಪ್ಪಕೊಟ್ಟೆಮ್ಮೆ ಹೊಡಕೊಂಡು। ತೌರೂರ ತಿಟ್ಹತ್ತಿ ತಿರುಗಿ ನೋಡ್ಯಾಳೆ।।

**ಮಂದಿ ಮಂದಿ ಎಂದು ಮಂದಿ** **ರಾಗ: ಆನಂದಭೈರವಿ**

ಮಂದಿ ಮಂದಿ ಎಂದು ಮಂದಿ ನಂಬಲಿ ಹೋದೆ। ಮಂದಿ ಬಿಟ್ಟಾರ ನಡುನೀರ।।2ಸಾರಿಹೇಳಿ।। ಮಾದೇವ (ಮಲ್ಲಯ್ಯಾ) ತಂದಿ ನನಕೈಯ ಬಿಡಬ್ಯಾಡ।।ಪ।। ಮಾದೇವ ನಿನಹೊರತು ನಾನ್ಯಾರ ನಂಬಿಲ್ಲ। ನಾ ಮಾಡೇನೆಂಬ ಅಳವಿಲ್ಲ।2ಸಾರಿ।। ಮಾದೇವ ನೀ ನಡೆಸು ನನ್ನ ಸರುವೆಲ್ಲ।।1।। ಕರುಣ ಬಂದರೆ ಕಾಯೊ ಮರಣ ಬಂದರೆ ಒಯ್ಯೊ। ಕರುಣಿ ಕಲ್ಯಾಣಿ ಬಸವಣ್ಣ ।2ಸಾರಿ। ಕಾಸಿಲಿಂಗ ಕಡೆತನಕ ಕಾಯೊ ಅಭಿಮಾನ।।2।। ಹಾಲುಂಡ ತವರೀಗೆ ಏನೆಂದು ಹಾಡಲೆ। ಹೊಳೆದಂಡೇಲಿರುವ ಕರಕೀಯ।।2ಸಾರಿ। ಕುಡಿಹಾಂಗ ಹಬ್ಬಲಿ ಅವರ ರಸಬಳ್ಳಿ।।3।। ಬೆಳ್ಳಗೆ ಬೆಳಗಾಗಿ ಬೆಳ್ಳಿ ಮೂಡಲವಾಗಿ। ಒಳ್ಳೊಳ್ಳೆ ಮೀನಾ ಗರಿತೆಗೆದು।2ಸಾರಿ। ಆಡ್ಯಾವೆ ಗರತಿ ಗಂಗಮ್ಮನ ಉಡಿಯಾಗ।।4।। ಚಿಂತಿ ಮಾಡಲಿ ಬೇಡ ಛೀ ಹುಚ್ಚಿ ಹಡೆದವ್ವ। ಚಿಂತ್ಯಾಗ ಕಾಯ ಇಳಿತಾದ।2ಸಾರಿ। ಪಾಂಡವರಂಥಹವರಿಗುಂಟು ವನವಾಸ।।5।।

**ಯವ್ವ ಯವ್ವ ನಾ ಹೆಂಗೆ ಬಾಳಲೇ** **ರಾಗ: ಪುನ್ನಾಗವರಾಳಿ**

ಯವ್ವ ಯವ್ವ ನಾ ಹೆಂಗೆ ಬಾಳಲೇ? ಇಂಥಾ ಗಂಡನ ಕೂಡಿ ಹ್ಯಾಂಗೇ ಬಾಳುವೆ ಮಾಡುವೇ? ಯವ್ವ ಹಿಟ್ಟು ಅಂದ್ರೆ

ನನ್ನ ಗಂಡ। ಸಿಟ್ಟು ತಾನೆ ಸೀನು ತಾನೆ। ತೊಂಡೆಕಾಯ್ನಂಗೆ ಗುಕ್ಕೆಮಾಡಿ ನುಂಗುತಾನೆ॥1॥ ಯವ್ವ ಬಾನ ಅಂದ್ರೆ ನನ್ನ ಗಂಡ ಬಾಗುತಾನೆ ಬಳುಕುತಾನೆ। ಬಾಳೆಕಾಯ್ನಂಗೆ ಗುಕ್ಕೆ ಮಾಡಿ ನುಂಗುತಾನೆ॥2॥ ಯವ್ವ ಹಿತ್ತಿಲಿಗೆ ಹೋಗಲಾರ ಹಿಡಿಹುಲ್ಲ ತರಲಾರ। ಕೋಳಿ ಕುಯ್ಯೋರ ಮನೆಗೇ ಕುಕ್ಕೆ ಹಾಕ್ಕೊಂಡ್ಹೋಗುತಾನೆ॥3॥ ಏರೀಗೆ ಹೋಗಲಾರ ಏಡಿಕಾಯ್ ತರಲಾರ। ಕುರಿಕುಯ್ಯೋರ್ ಮನೆಗೆ ಕುಂಟ್ಕೊಂಡ್ ಕುಂಟ್ಕೊಂಡ್ ಹೋಗುತಾನೆ॥4॥ ಹೊಲದತ್ರ ಹೋಗಲಾರ ಹೊರೆಹುಲ್ಲ ತರಲಾರ। ಕಡ್ಡಮಜ್ಜಿಗೆನೆಲ್ಲಾ (ಕುಡ್ಡೆ ಕುಡ್ಡೆ) ಕುಡಿವೆ ಕುಡಿವೆನೆನ್ನುತ್ತಾನೆ॥5॥ ಮೂರು ಮುದ್ದೆ ಉಣ್ಣುತಾನೆ ಮೂಲೇಲಿ ಕೂರುತಾನೆ। ಊರ ಮುಂದ್ಹೋಗಂದ್ರೆ ಊರುಗೋಲ ಬೇಡುತಾನೆ॥6। ಅನ್ನದ ಮುದ್ದೆ ಉಣ್ಣುತಾನೆ ಅಲ್ಲಲ್ಲಿ ಕೂರುತಾನೆ। ಹಾರಾಡ್ಕೊಂಡ್ಹೋಗಂದ್ರೆ ಗೋಳಾಡ್ಕೊಂಡಳುತಾನೆ॥7॥ ಯವ್ವ ಎಬ್ಬೀಸೆ ಗದ್ದೆಗ್ಹೋಗೋಣ ಈ ಮುಕ್ಕನ್ನ ಮೂಳನ್ನ, ಕಿವಿ ಹರಕನ್ನ, ಕೆಪ್ಪನ್ನ ಎಬ್ಬೀಸೆ ಗದ್ದೆಗ್ಹೋಗೋಣ॥8॥

**ರೊಟ್ಟಿ ಬುತ್ತಿ ಮಾಡಿಕೊಂಡು** **ರಾಗ:ಪುನ್ನಾಗವರಾಳಿ**

ರೊಟ್ಟಿ ಬುತ್ತಿ ಮಾಡಿಕೊಂಡು ಎತ್ತಿನ ಮೇಲೆ ಹೇರಿಕೊಂಡು ನಾರಿ ಉಟ್ಯಾಳಪ್ಪ ಕರೀ ಸೀರಿ॥ಪ॥ ಅಗಸಿ ಹೊಲ ಕಂಡ್ಯಾಳ ಅವಸರ ಮಾಡ್ಯಾಳ। ಯಾವಾಗ ನಾ ನೋಡೇನವ್ವ ತಾಯಾಮಾರಿ॥2ಸಾರಿ॥1॥ ತವರೂರ ಹಾದಿಯಲ್ಲಿ ಗಿಡವೆಲ್ಲಾ ಮಲ್ಲಿಗೆ। ಹೂವರಳಿ ಪರಿಮಳ ಘಮ್ಮೆಂದು॥2ಸಾರಿ॥ ನಾಕೊಯ್ದು ಗಿಡಕೊಂದು ಹೂವ ಮುಡಿದೇನ। ಯಾವಾಗ ನಾನೋಡೆನವ್ವ ತಾಯಾಮಾರಿ॥2॥ ಬಾರೋ ಬಾರೋ ನನ್ನ ಬಣ್ಣದೊಲ್ಲಿಯ ಅಣ್ಣ। ಬರಿಕೈಲಿ ಬರಲಾರೆ ತಡೀ ತಂಗೀ। ವಾಲೆಗೆ ತರುವೆನು ಬಿಡಿಮುತ್ತಾ। ತಂಗೀನ ಕರಕೊಂಡು ಕೇಂದೀನ ಹೊಡಕೊಂಡು ತಂಗಿ ಮಕ್ಕಳಿಗೆ ಬಿಸಿಲೆಂದು॥2ಸಾರಿ॥ ಯಾವಾಗ ನಾನೋಡೆನವ್ವ ತಾಯಿಮಾರಿ॥3॥ ತಂಗೀನ ಕರಕೊಂಡು ಕೆಂಪೀನ ಹೊರಡೊಂಡು। ತಂಗೀ ಮಕ್ಕಳಿಗೆ ಬಿಸಿಲೆಂದು। ಅಣ್ಣಯ್ಯ ವಲ್ಲೀ ಮುಂಜಿರಂಗ ಹಿಡಿದಾನ। ಯಾವಾಗ ನಾ ನೋಡೆನವ್ವಾ ತಾಯಿಮಾರಿ॥4॥

**ಸುಖ ಎಲ್ಲರಿಗೆಲ್ಲೈತವ್ವ** **ರಾಗ: ಸಾವೇರಿ**

ಸುಖ ಎಲ್ಲರಿಗೆಲ್ಲೈತವ್ವ ದುಃಖ ತುಂಬೈತೆ ಮರ್ತ್ಯಾದಾಗ। ತಾ ಮಾಡಿದ ಪಾಪ॥ ತಾ ಕಳೆಯಬೇಕ। ಶಿವನ ಮ್ಯಾಲ್ಯಾಕ ಸಿಟ್ಟಾಗ ಬೇಕ॥ ಸತ್ಯವಂತನಾದ ಹರಿಶ್ಚಂದ್ರರಾಜ। ಹೆಂಡತಿ ಮಕ್ಕಳ ಮಾರಿ ಋಣವ ತೀರಿಸಿದ। ಹೊಲೆಯನಾಳಾಗಿ ಸುಡುಗಾಡ ಕಾಯ್ದ। ತಾ ಮಾಡಿದ ಪಾಪ ತಾ ಕಳೆಯಬೇಕ॥ ತಂದೆ ಮಾತಿಗಾಗಿ ಶ್ರೀರಾಮಚಂದ್ರ। ಹದಿನಾಲ್ಕು ವರ್ಷ ವನವಾಸಕ್ಹೋದ। ಸೀತೆಯ ಕಳಕೊಂಡು ಬಲು ಕಷ್ಟಪಟ್ಟ। ತಾ ಮಾಡಿದ ಪಾಪ ತಾ ಕಳೆಯ ಬೇಕ॥ ಕೌರವರ ಮೋಸದಿ ಪಂಚಪಾಂಡವರು। ರಾಜ್ಯಕೋಶ ಬಿಟ್ಟು ಬವಣೆಪಟ್ಟರು। ಅಪಮಾನಗಳನೆಲ್ಲ ಸಹಿಸಿಕೊಂಡರು। ತಾ ಮಾಡಿದ ಪಾಪ ತಾ ಕಳೆಯಬೇಕ॥

**ಸೊಸಿ ಬಂದ ಒಂದು ವರುಷದಾಗ** **ರಾಗ: ಶುಭಪಂತುವರಾಳಿ**

ಸೊಸಿ ಬಂದ ಒಂದು ವರುಷದಾಗ ನನ್ಮಗ ಬ್ಯಾರಿಹೋದ। ಮೋರೆ ಚೆಂದಕ ಮರುಳಾಗಿ ತನ್ನ ತಾಯ ಕೊರಳ ಕೊಯ್ದ॥ಪ॥ ಅತ್ತಿ ಎಂಬ ಗೌರಿಲ್ಲ ಈಕಿಗೆ ಕಾಸಿನ ಕಿಮ್ಮತ್ತು। ತುತ್ತು ಕೂಳಿಗೂ ಅಂತಾರೀಗ ಕೊಡಲಿ ಹಾಂಗ ಮಾತ। ಮುಪ್ಪಾನ್ಮುದುಕಿ ಕಟ್ಟಿದ ಕನಸು ಹಾಳಾಗಿ ಹರಿದ್ಹೋತ। ಸೊಸಿ ಬರ್‍ತಳ ಸುಖ ತರ್‍ತಳ ಗಾಳ್ಯಾಗಿನ ಮಾತ॥1॥ ಮಗ ಅಂತು ನಾ ಸನಿಹ ಬಂದರಾ ಮೊಗ ತಿರುವುತಾನ। ಅವ್ವ ಅನ್ನೋದ್ ಮರೆತೋಯ್ತೀಗ ಮುದುಕಿ ಅಂತಾನ। ಮೊಲಿ ಕೊಟ್ಟು ಸಲಹಿದ ತಾಯಿಮ್ಯಾಗ ಮಗನ ರೀತಿ ಹೀಂಗಾ। ಹುಟ್ಟು ಹಾಕಿಸಿ ಹೊಳೆಯ ಹಾಯ್ದಮೇಲೆ ಅಂಬಿಗನ ಮರೆತ್ಹಾಂಗ॥2॥ ಇದನು ಕಂಡು ನಾನು ಯಾರಿಗ್ಹೇಳಿದರು ಅರುಳು ಮರುಳು ಅಂತಾರ। ದೂರಊರ ಗಂಡನಮನಿಯ ಮಗಳನು ಕರೆದು ತರುವರಾರು? ಯಾರಿಗ್ಹೇಳಿ ಏನಾಗುವುದೈತೆ ನನ್ನ ದೈವ ಕೆಟ್ಟಾ। ಯಾವ ಜನ್ಮದ ಪಾಪಕ್ಕಾಗಿ ದೇವರಿದನು ಕೊಟ್ಟ॥3॥

**ಸೋಲಿಸಬೇಡಾ ಗೆಲಿಸಯ್ಯಾ** **ರಾಗ: ಚಕ್ರವಾಕ**

ಸೋಲಿಸಬೇಡಾ ಗೆಲಿಸಯ್ಯಾ ಎನ್ನ (2ಸಾರಿ) ಮೂಲೋಕದಯ್ಯ ದೇವ ನರಸಯ್ಯ। ಸೋಲಿಸ ಬೇಡಾ ಗೆಲಿಸಯ್ಯ ನನ್ನ॥2ಸಾರಿ॥1॥ ಮೂಡ ಮುತ್ತಲ ಗಿರಿಯೊ ಚೆಲುವ ಚಿನ್ನದ ಗಿರಿಯೊ। ಸೋಲಿಗರ್ ಸೀಮೆ ಸಿರಿಹರಿಯೊ(2ಸಾರಿ) ಮಾದೇವ ಸೋಲಿಸ ಬೇಡಾ ಗೆಲಿಸಯ್ಯ। ಎನ್ನ। 2ಸಾರಿ॥2॥ ನಂಜನಗೂಡಲ್ಲಿ ನೆಂಟ ನೀ ನಿರುವಾಗ। ಎಂಟೆಂಟು ದಿನಕೂ ಬರುವೆನು॥2ಸಾರಿ॥ ನಂಜುಂಡ ಸೋಲಿಸ ಬೇಡಾ ಗೆಲಿಸಯ್ಯ ನನ್ನ ॥2ಸಾರಿ॥3॥ ವೆಂಕಟರಮಣಾನೆ ಮುದ್ದು ಗೋವಿಂದನೆ। ಭಕುತರಿಗೊಲಿಯೊ ಸುಗುಣಾನೆ॥2ಸಾರಿ॥ ಮಾದೇವ ಸೋಲಿಸ ಬೇಡ ಗೆಲಿಸಯ್ಯ॥2ಸಾರಿ॥4॥ ಚಿನ್ನದ ಗುಡಿಯೋನೆ ಮುತ್ತಿನ ರಥದೋನೆ ಗಂಡ್ಲುಲಿ ಮೇಲೆ ಮೆರೆಯೋನೆ॥2ಸಾರಿ॥ ಮಾದೇವ ಸೋಲಿಸಬೇಡಾ ಗೆಲಿಸಯ್ಯ ನನ್ನ॥2ಸಾರಿ॥5॥ ನಿಸ್ನಾದೀಲಿ ಚೆಲ್ಲವೊ ಮಲ್ಲಿಗೆ ಪರಿಮಳ। ಬೆಳುವೆಕಾರ ಬೆಟ್ಟದ ಮಲ್ಲಯ್ಯ। ಸೋಲಿಸಬೇಡಾ ಗೆಲಿಸಯ್ಯ ನನ್ನ॥2ಸಾರಿ॥6॥

**ಹಕ್ಕೀಗೆ ಗೂಡಾಸೆ ಮಕ್ಕಳಿಗೆ** **ರಾಗ: ಸಾವೇರಿ**

ಹಕ್ಕೀಗೆ ಗೂಡಾಸೆ ಮಕ್ಕಳಿಗೆ ತಾಯಾಸೆ ಬಿತ್ತಿದ ಬೆಳೆಗೆ ಮಳೆಯಾಸೆ। ಬಿತ್ತಿದ ಬೆಳೆಗೆ ಮಳೆಯಾಸೆ ಕಂದಮ್ಮ। ಹತ್ತಿರ ಇರಲು ನಮಗಾಸೆ॥ ಅಳುವ ಕಂದನ ತುಟಿಯು ಹವಳಾದ ಕುಡಿಹಾಂಗ। ಕುಡಿಹುಬ್ಬು ಬೇವಿನೆಸಳ್ಹಾಂಗ।2ಸಾರಿ॥ ಕಣ್ಣೋಟ ಶಿವನ ಕೈಯಲಗು ಹೊಳೆದಾಂಗ॥1॥ ಹೆಣ್ಣಿದ್ದ ಮನೆಗೆ ಕನ್ನಡಿ ಯಾತಕ। ಹೆಣ್ಣು ಸಣ್ಣವಳು ಒಳಗಿರಲು। (2ಸಾರಿ) ನನ ಮಗಳು ಕನ್ನಡಿ ಹಾಂಗ ಹೊಳೆಯುವಳು॥2॥ ಹೆಣ್ಣು ಮಕ್ಕಳು ನಮಗೆ ಪುಣ್ಯದ ಫಲತಾಯಿ। ಅನ್ನಿಗರ ಮಗನು ನನ ಮನಿಗೆ। (2ಸಾರಿ) ಬರುವಂಥ ಹೆಣ್ಣು ಮಕ್ಕಳನು ಕೊಡುಶಿವನೆ॥3॥

**ಹೆಜ್ಜೆ ಹೆಜ್ಜೆಗೂ ಗಿಲಿ ಗಿಲಿ ಗಿಲಿ ಗಿಲಿ ಗೆಜ್ಜೆಯ** **ರಾಗ: ಶಿವರಂಜನಿ**

ಹೆಜ್ಜೆ ಹೆಜ್ಜೆಗೂ ಗಿಲಿ ಗಿಲಿ ಗಿಲಿ ಗಿಲಿ ಗೆಜ್ಜೆಯ ಕುಣಿಸುತ ಬರುವಾಕಿ। ಉಜ್ವಲ ಬಣ್ಣ ಕಾಡಿಗೆಗಣ್ಣ ಹೊಸಗರತಿಯ ಹೆಣ್ಯಾರೀಕಿ? ಗೊತ್ತಿಲ್ಲೇನ ಗೌಡರ ಮನಿ ಸೊಸಿ ಮೊನ್ನೆ ಮೊನ್ನೆಯೇ ಬಂದಾಕಿ। ಸುತ್ತು ಮುತ್ತನೀ ಹಳ್ಯಾಗೆಲ್ಲ ಚೆಲುವಿಯಂತ ಹೆಸರಾದಾಕಿ॥ ಅಯ್ ನನ್ ಶಿವನ ಗೌಡರ ಸೊಸಿಯ ವ್ಯರ್ಥನೋಡಿವಳ ಚಲುವೇಕೆ। ಮೊದಲ ಜನ್ಮದಾಗ ಮಾಡಿದ ಪಾಪ ಬಿಟ್ಟಿತ್ಯಾಂಗಿದು ಕಿಡಿಬೆಂಕಿ। ಇದೇನ ಗೆಣತಿ ಈ ನುಡಿಯಾಡ್ತಿ ಇವಳ ಮಾತಿಗ್ಯಾತರ ಕೊರತಿ। ಬೆಳ್ಳಿ ಬಂಗಾರ ರೊಕ್ಕ ರೂಪಾಯಿ ಕಾಳು ಕಡ್ಡೀ ಮನಿ ತುಂಬೈತಿ॥ ಬೆಳ್ಳಿ ಬಂಗಾರ ರೊಕ್ಕ ರೂಪಾಯಿ ಬಿದ್ದರೇನ ಬಿದ್ದಿರತೈತಿ। ಒಳ್ಳೇಯ ಒಗೆತನ ಒಂದಿರದಿದ್ದರೆ ಹೆಣ್ಣುಗಳಿಗೆ ಸುಖ ಏನೈತಿ॥ ಗೌಡರ ಮಗನಿಗೆ ಏನಾಗೈತಿ ಒಳ್ಳೆ ಒಗೆತನ ಅಲ್ಲಂತೀ। ಮುದುಕ ತದಕನಾ ಬ್ಯಾನಿ ಬ್ಯಾಸರಾ ಹೇಳಾತಗೆ ಏನಾಗೈತಿ....॥ ಏನಾಗೈತಿ ಹೇಳು ನಿನ್ನ ಪತಿ ಇವನ್ಹಾಂಗಿದ್ದರೆ ಸುಮ್ಮನಿರತೀ। ಹತ್ತು ಕಡೆಗೂ ಹರಿದ್ಹಂಚಿ ಬಿಟ್ಟಿದಾನೆ ಗೌಡರ ಮಗ ತನ್ನ ಪ್ರೀತಿ॥ ಹಿಂಗೈತೇನ? ಹೆಣ್ಣು ಬದುಕು ಸುಡು ದೊಡ್ಡವರದು ಇಂಥಾ ನಡತಿ। ದೊರೆಯ ಪ್ರೀತಿ ಹೊರಗಾಡುತಿದ್ದರೆ। ಗರತಿಯ ಜೀವಕೆ ಸಾವೇಗತಿ॥ ಅದಕಾ ನಾ ಹೇಳಿದೆ ಗೆಣೆತವ್ವ। ಮೊದಲ ಬಾರಿ ಬಂದಾಳೀಕಿ। ಎದೆಯ ಒಳಗೆ ಕುದಿ ಎದ್ದಿಲ್ಲಿನ್ನು। ಕುಣಿಸುತ ಬರುತಾಳ ಗಿಲಿ ಗಿಲಿಕಿ। ಹೆಜ್ಜೆ ಹೆಜ್ಜೆಗೂ ಗಿಲಿ ಗಿಲಿ ಗಿಲಿ ಗಿಲಿ ಗೆಜ್ಜೆಯ ಕುಣಿಸುತ ಬರುವಾಕಿ। ಉಜ್ವಲ ಬಣ್ಣ ಎರಳೆಯ ಕಣ್ಣ ಉಳಿಸಿ ಕೊಂಡಾಳೇನೀಕಿ?

**ಹೆಣ್ಣಿನ ಜನುಮಕ್ಕ ತಾಯ್ತನ** **ರಾಗ: ಖರಹರಪ್ರಿಯ**

ಹೆಣ್ಣಿನ ಜನುಮಕ್ಕ ತಾಯ್ತನ ಬರ್ತಾದ। ಬಂದ್ಹಾಗ ಬಯಕೆ ಬೆಳಿತಾದ। ಭೀಮಾರ್ಜುನರಂಥ ಮಕ್ಕಳೆ ಬೇಕೆಂದು। ಹಂಬಲಿಸಿ ಹರಕೆ ಹೊತ್ತಾಳು॥1॥ ಹಾಲ್ತುಂಬಿದ ಮುತ್ತೀನ ತೆನೆಜೋಳ ದ್ಹಾಂಗೆ। ಬಳುಕುತ್ತ ಬಂದಾಳು ತವರೀಗೆ ತಂಗವ್ವ ಬಸಿರಾ ಹಸಿರುಟ್ಟು ಬಂದ್ಯಾಳು॥2॥ ತಂಗಿಯು ಬರುತಲೇ ತಲೆಬಾಗಿಲಲ್ಲೆ ತಂಬೀಗೆ ನೀರ ತಂದಾನು। ಆರುತಿ

ಕೀರುತಿ ಎರಡಕ್ಕು ಒಂದಾಗಿ ಹಡೆಯವ್ವ ಎಂದು ಹರಸ್ಯಾನು॥3॥ ಹೆಣ್ಣು ಜನುಮಕ್ಕ ಮಕ್ಕಳೆರೆಡೆ ಸಾಕು। ಹೆಣ್ಣಾದರೇನು? ಗಂಡಾದರೇನು? ಹೆಣ್ಣಾದರಾಗಲಿ ಗಂಡಾದರಾಗಲಿ। ಒಳ್ಳೆಯ ಮಕ್ಕಳ ಪಡೆಯವ್ವ॥4॥ ಚಿಕ್ಕ ಸಂಸಾರ ಚೊಕ್ಕವಾಗಿರುತೈತ ನಲ್ಮೆ ನೆಮ್ಮದಿ ಸಿಗ್ತೈತ। ದೇಶಕ್ಕೂ ಮಿತವಾಗಿ ಮನಸಿಗೂ ಹಿತವಾಗಿ ಸಮೃದ್ಧಿ ಜೀವನ ದೊರಕ್ತೈತೆ॥5॥

**ಹೆಣ್ಣಿನ ಜನುಮಕ್ಕ ಅಣ್ಣತಮ್ಮರು** **ರಾಗ: ಸಾವೇರಿ**

ಹೆಣ್ಣಿನ ಜನುಮಕ್ಕ ಅಣ್ಣತಮ್ಮರು ಬೇಕು। ಬೆನ್ನು ಕಟ್ಟುವರು ಸಭೆಯೊಳಗೆ। ಸಾವಿರ ಹೊನ್ನುಕಟ್ಟುವರು ಉಡಿಯೊಳಗೆ॥1॥ ಎನಗೆ ಯಾರಿಲ್ಲಂತ ಮನದಾಗ ಮರುಗಿದರ। ಪರನಾಡಲ್ಲೊಬ್ಬ ಪ್ರತಿಸೂರ್ಯ। ನನ್ನಣ್ಣ। ಬಿದಿಗೆ ಚಂದ್ರಮ ಉದಿಯಾದ॥2॥ ಮನೆಯ ಹಿಂದಿನ ಮಾವು ನೆನೆದರೆ ಘಮ್ಮೆಂದು ನೆನೆದಂಗೆ ಬಂದ ನನ್ನ ಅಣ್ಣ। ಬಾಳೀಯ ಗೊನೆಹಾಂಗ ತೋಳಾ ತಿರುವೂತ॥3॥ ಸರದಾರ ಬರುವಾಗ ಸುರಿದಾವು ಮಲ್ಲೀಗಿ। ದೊರೆ ನನ್ನ ತಮ್ಮ ಬರುವಾಗ। ಯಾಲಕ್ಕಿ ಗೊನೆಬಾಗಿ ಹಾಲ ಸುರಿಸಾವ॥4॥ ಅಣ್ಣ ಬರುತಾನಂತ ಅಂಗಳಕೆ ಕೈಕೊಟ್ಟು ರನ್ನದ ಬಚ್ಚಣಿಕೆ ಮಣೆಹಾಕಿ ಕೇಳೇನು ತಣ್ಣಗಿಹರಣ್ಣ ತವರವರು॥5॥

**ಹೆಣ್ಣು ಮಕ್ಕಳ ದುಃಖ ಹೆತ್ತವ್ವ ಬಲ್ಲಳು**

ಹೆಣ್ಣು ಮಕ್ಕಳ ದುಃಖ ಹೆತ್ತವ್ವ ಬಲ್ಲಳು। ನೆತ್ತಿಮೇಲಿರುವಾ ಶಿವಬಲ್ಲಾ। ಹಡೆದವ್ವ ಇರೊತನಕ ತವರು ಮನೆ ನಮ್ಮದಾ। ಹಡೆದವ್ವ ತೀರೀ ದಿನ ಒಂದು। ಹಡೆದವ್ವ ತೀರೀ ದಿನ ಒಂದು ಕಳೆದರೆ। ತವರಿನವರ್‍ಯಾರೋ ನಾವ್ಯಾರೋ॥1॥ ತಾಯಿಯಿಲ್ಲದ ತೌರನು ಮರೆಯದಿರು ಮನವೇ। ಮೇವಿಲ್ಲದಾ ಹೊಲಕೆ ಕರು ಹೋಗಿ। ಮೇವಿಲ್ಲದಾ ಹೊಲಕೆ ಕರು ಹೋಗಿ ಅಳುವಂತೆ। ತಾಯಿ ಇಲ್ಲದ ತೌರಲಿ ಹೆಣ್ಣಗೋಳು॥2॥ ಸಾವಿರ ಕೊಟ್ಟರೂ ಸೋದರರ ಮನೆಬೇಡ। ಸಾವಿರದ ಮೇಲೆ ಸಿರಿಹೊನ್ನು। ಸಾವಿರದ ಮೇಲೆ ಸಿರಿಹೊನ್ನು ಕೊಟ್ಟಾರು। ಹಂಗೀನಾ ಸೋದರರ ಮನೆಬೇಡ॥3॥ ಹೆಣ್ಣಾಗಿ ಹುಟ್ಟುವುದಕಿಂತ ಮಣ್ಣಾಗಿ ಹುಟ್ಟಿದರೆ। ಮಣ್ಣಿನಾ ಮೇಲೊಂದು ಮರವಾಗಿ। ಮಣ್ಣಿನಾ ಮೇಲೊಂದು ಮರವಾಗಿ ಹುಟ್ಟಿದರೆ। ಪುಣ್ಯವಂತರಿಗೆ ನೆರಳಾಗುವುದು॥4॥ ಹೂವಾ ಮಾರುವ ಗೊಲ್ಲ ಹೂವ್ಯಾಕೆ ಇಲ್ಲಿ ತಂದೆ। ಹೂ ಕೊಳ್ಳೋ ಮಗಳು ಮನೆಲಿಲ್ಲ॥2ಸಾರಿ॥ ಅವಳ್ ತನ್ನ ಮಾವನ ಮನೆಗೆ ನಡೆದಾಳು॥5॥

## ಸುಗ್ಗಿ

**ಅಡಿಯ ಗೆಜ್ಜೆ ನಡುಗೆ ಹೆಜ್ಜೆ** **ರಾಗ: ಶಂಕರಾಭರಣ**

ಅಡಿಯ ಗೆಜ್ಜೆ ನಡುಗೆ ಹೆಜ್ಜೆ ಇಡುತ ಸುಗ್ಗಿ ಬರುತಿದೆ। ಸುಗ್ಗಿ ಬರೆ ಹಿಗ್ಗಿ ತಿರೆ॥2ಸಾರಿ॥ ಸಗ್ಗ ಸುಖವ ತರುತಿದೆ॥ಪ॥ ಕಣಿವೆಯಿಳಿದು ತಾ ಮರವನೇರಿ ತರುಗಳಲ್ಲಿ ತಳಿರ ಹೇರಿ। ಹೊಸತು ಜೀವ ಕಳೆಯ ಬೀರಿ ಸುಗ್ಗಿ ಮೂಡುತ್ತಿರುವುದು। ಬನದ ಬನದ ದಿನದ ನಿನಿದ ಮನದೊಳಾಡುತಿರುವುದು॥ ಬಂಡನುಂಡು ದುಂಬಿಹಿಂಡು ಹಾಡುತಿಹುವು ಹಾರುತ। ಮತ್ತಮಧುಮಾಸವಿದು ಬನ್ನಿರೆಂದು ಸಾರುತ। ಜಾರುತಿಹುದು ಮಾಗಿಚಳಿ ಕುಸುಮಿಸಿರುವ ಲತೆಗಳಲಿ। ಮರೆಯುತಿಹುದು ಸೊಕ್ಕಿದಳಿ ಮುಕ್ತ ಜೀವರಂದದಿ। ಉಲಿಯೆ ಪಿಕಶುಕಗಳು-ಶುಭ ಸುಗ್ಗಿ ಬಂದಿತಂದದಿ॥ ಮಧುವೆ ಬಾರ ಮುದವ ತಾರ ನೀನೆ ದೇವದೂತನು। ಪರದ ಚಿಂತೆ ಮರೆಯದಂತೆ ಕಳುಹುವನು ವಿಧಾತನು। ಭುವಿಯ ಸಿಂಗರಿಸುವ ಬಾರ ಪರದ ಬೆಳಕನಿಳಗೆ ತಾರ। ಸೊಬಗೆ ಶಿವನು ಎಂದು ಸಾರ ಬಾರ ಶಕ್ತಿದಾಯಕ। ಹಳತು ಕೂಡಿ ಹೊಸತು ಮೂಡಿ। ಬಾರೆಲೊ ಋತುನಾಯಕ॥

**ಓ ಜಗನ್ನಾಥ ಜಗದೀಶ** **ರಾಗ: ಮಲಯಮಾರುತ**

ಓ ಜಗನ್ನಾಥ ಜಗದೀಶ ಜಗತ್ಪಾಲಕ। ಸುಗ್ಗಿಕುಣಿತ। ವರ್ಷಕ್ಕೆಲ್ಲಾ ಒಂದೇ ಬಾರಿ ಸುಗ್ಗಿ ಕುಣಿತ। ರೈತರೆಲ್ಲ ಕೂಡಿ ಯುಗಳ

ಗೀತೆ ಹಾಡಿ। ಸುಗ್ಗಿಕುಣಿತಾ॥ಪ॥ ಸುಗ್ಗಿ ತಾಯಿ ನುಗ್ಗಿ ಬಂದು ಸಗ್ಗವನ್ನೇ ತಂದಳೊ। ಚಿಗುರ ಹೊತ್ತು ಮೊಗರ ಮುಡಿದು ಮಧುರ ಗೀತ ಹಾಡ್ಯಾಳೋ। ಹೊಯ್ಯ ಹೊಯ್ಯ ಹೊಯ್ಯ॥ ತೆನೆಯ ಕೊಯ್ದು ತೆನೆಯ ಬಡಿದು ದುಡಿದು ಬಂದ ರೈತರು। ಉಕ್ಕಿ ಹೊಡೆದು ರೊಕ್ಕ ಮಾಡಿ ಉಪ್ಪರಿಗೆ ಕಟ್ಯಾರು॥ ಮದುಮಗಳು ಮಧುರವಾದ ಲಜ್ಜೆ ಹೆಜ್ಜೆ ಹಾಕ್ಯಾಳೊ। ಗೆಜ್ಜೆ ನಾದ ಕೊಟ್ಯಾಳು॥ ಮದುಮಗ ಮಗುಟ ಹೊದ್ದು ಮಡದಿ ಮನೆಗೆ ನಡೆದಾನೊ। ಮಡದಿ ಮುಖ ಕಂಡ್ಯಾನೊ। ಹೊಯ್ಯ ಹೊಯ್ಯ ಹೊಯ್ಯ। ಮಂಟಪ ಕಟ್ಟಿ ಮದುವೆ ಮಾಡಿ ಹಾಡಿ ಹಾಡಿ ನಲಿದ್ಯಾರೋ ನೋಡಿ ನೋಡಿ ಕುಣಿದ್ಯಾರೋ। ಸುಗ್ಗಿ ಮಹಿಮೆ ಸಗ್ಗ ಕಂಡು ಹಿಗ್ಗಿ ಹಿಗ್ಗಿ ಕುಣಿದ್ಯಾರೋ ಹಾಡಿ ಹಾಡಿ ನಲಿದ್ಯಾರೋ॥ಓ....॥

**ಬನ್ನಿರಿ ಬನ್ನಿರಿ ಮಣ್ಣಿನ ಮಕ್ಕಳೆ ರೈತರೇ** **ರಾಗ: ಶುದ್ಧಧನ್ಯಾಸಿ**

ಬನ್ನಿರಿ ಬನ್ನಿರಿ ಮಣ್ಣಿನ ಮಕ್ಕಳೆ। ರೈತರೇ ನೇಗಿಲ ಯೋಗಿಗಳೇ। ಕಾಡಿನ ಬಂಟರೆ ಮುಗಿಲಿನ ನೆಂಟರೆ। ಪೈರಿನ ಗೆಳೆಯರೆ ಭೋಗಿಗಳೆ॥ ಸುಗ್ಗಿಯ ಹಬ್ಬದ ಹಾಡನು ಹಾಡಿ। ಸುಗ್ಗಿಯ ಸೊಬಗಿನ ಕುಣಿತವ ಮಾಡಿ। ಬನ್ನಿರಿ ಬನ್ನಿರಿ ಹೊಲಗಳ ಗೆಳೆಯರೆ। ಭೂಮಿಯು ಹಾಡಿದೆ ಗೀತೆಗಳ॥ ತೆಂಕಣ ಗಾಳಿಯು ಬೀಸುತ್ತಿದೆ। ತೆನೆಗಳು ಕಂಪನು ಸೂಸುತ್ತಿದೆ। ಹೊನ್ನಿನ ಹೊಲಗಳು ಮೆರೆಯುತ್ತಿವೆ। ಚಿನ್ನದ ತೆನೆಗಳು ಕರೆಯುತ್ತಿವೆ॥ ಸೊಬಗಿನ ಸುಗ್ಗಿಗೆ ಸ್ವಾಗತವೀಯಲು। ಚೋರೆಯು ಲಾವುಗೆ, ಕೋಗಿಲೆ ಗಿಣಿಗಳು। ಕನಸಿನ ಪದಗಳ ಹಾಡುತಿವೆ॥2ಸಾರಿ॥ ಚಿಗುರಿನ ಹಸುರಿನ ವಸನವ ಹೊದೆದು। ಹೂವಿನ ಮೊಗ್ಗಿನ ಬೆಡಗನು ತಳೆದು। ಬನಗಳು ನಲಿನಲಿದಾಡುತಿವೆ॥2ಸಾರಿ॥ ಸುಗ್ಗಿಯ ಹಾಡುತ ಕುಣಿಯುತ ಬನ್ನಿ। ಮಣ್ಣಿನ ಮಕ್ಕಳಿರ। ಹಿಗ್ಗುತ ಸುಗ್ಗಿಯ ಸಗ್ಗವ ತನ್ನಿ। ನೆಲಸಿರಿಯೊಕ್ಕಲಿರ॥

**ಸಗ್ಗದ ಸಿರಿ ಬಂತು** **ರಾಗ:ಪುನ್ನಾಗವರಾಳಿ**

ಸಗ್ಗದ ಸಿರಿ ಬಂತು ನಮ್ಮೂರಿಗೆ। ಸುಗ್ಗಿಯ ಸೊಬಗಿಂದ ನಮ್ಮೂರಿಗೆ॥ ಎತ್ತೆತ್ತಲೆತ್ತಲು ತೆನೆ ಚೆಲ್ಲಿ ಹಾಲ। ಚಿಲಿಪಿಲಿ ಹರಿಸಿತು ಹಕ್ಕಿಯ ಮೇಳ। ಕಣಕಣದಲ್ಲಿ ಬಂಗಾರ ಜಾಲ। ಬೆರಗಾಗಿ ನಿಂತಿತೋ ಚಲಿಸದೆ ಕಾಲ॥1॥ ಅರಿಸಿನ ಕುಂಕುಮ ಮೈಗೆಲ್ಲ ಮೆತ್ತಿ। ಹಸಿರುಟ್ಟ ನೆಲದವ್ವ ಮದುವಣಗಿತ್ತಿ। ತೊಟ್ಟಿರೆ ಜರತಾರಿ ಮರಗಳನೆತ್ತಿ। ದಿಬ್ಬಣ ಹೊರಟ್ಯಾವೋ ಪಾತರಗಿತ್ತಿ॥2॥ ಕೊಟ್ಟಿಗೆತುಂಬಾ ಕರುಗಳ ಅಂಬಾ। ಆಕಳಕೆಚ್ಚಲು ಅಮೃತದಕುಂಭಾ। ಹಟ್ಟಿಯಬೆಳಗಿದೆ ತುಂಬಿದಚೀಲ। ತೀರಿತೊದೇವರೆ ಬಡವರಸಾಲ॥3॥ ಚಾವಡಿಮುಂದಿಗೆ ಚಪ್ಪರವೆದ್ದು। ಸೇರಿತೋ ಊರೆಲ್ಲ ಗುಜುಗುಜುಸದ್ದು। ಬೆಳದಿಂಗಳಿರುಳಲ್ಲಿ ಬಯಲಾಟವಿದ್ದು। ಗೌಡರೆ ನೋಡಲು ಬಂದರು ಖುದ್ದು॥4॥ ಹೂಕಾಯ ನೀಡ್ವೆವು ದೀಪವನುರಿಸಿ। ಬಾರಮ್ಮ ಮಾರಮ್ಮಾ ಬಾ ಗೌರಿ ಹರಸಿ। ಊರಾಚೆ ಹನುಮ ಬಾ ನಮ್ಮ ಹರಸಿ। ಶರಣು ಶರಣೆಂಬೆವು ತುಂಗೆಗೆ ನಮಿಸಿ॥5॥ ದಿನನನದಾದ। ದಿನ್ನನದಾದ।

**ಸುವ್ವಿ ಸುವ್ವಮ್ಮ ಲಾಲಿ (ಕೋಲಾಟದ ಮಟ್ಟು)** **ರಾಗ: ಶಿವರಂಜನಿ**

ಸುವ್ವಿ ಸುವ್ವಮ್ಮ ಲಾಲಿ ಸುವ್ವಲಾಲಿ। ಜಾಣೆ ಜಾಗಾರದ್ಹೆಣ್ಣೆ ಸುವ್ವಲಾಲಿ॥ ಹತ್ತಾಣೆ ಗ್ಯಾವ್ ಭತ್ತಸುವ್ವಲಾಲಿ। ಐದಾಣೆ ಗ್ಯಾವ್ ಭತ್ತ ಸುವ್ವಲಾಲಿ॥1॥ ಹತ್ತಾಣೆಗ್ ಮುಸುರಿ ಭತ್ತ ಸುವ್ವಲಾಲಿ। ಐದಾಣೆಗ್ ಕೆಂಪ್ ಭತ್ತ ಸುವ್ವಲಾಲಿ॥2॥ ಭತ್ತಾವ ಕುಟ್ಟೋಣ್ಣ ಸುವ್ವಲಾಲಿ। ಅಕ್ಕಿಯ ತೆಗೆಯೋಣ ಸುವ್ವಲಾಲಿ॥3॥ ಅಟ್ಟಣೆಗೆ ಹತ್ತಿ ಹೊಟ್ಟನ್ನು ತೂರೋಣ ಗೆಣೆಗಾತಿ। ಹೊಟ್ಟನ್ನು ತೂರಿ ಅಕ್ಕಿಯ ರಾಶಿಯ ಮಾಡೋಣ್ಣ॥4॥ ಕಣ ಪೂಜೆಯ ಮಾಡೋಣ ಗೆಣೆಗಾತಿ ಮನೆಗೆ ಸಂಭ್ರಮದ ಭೋಜನವಿದು ಸುವ್ವಲಾಲಿ॥5॥ ಮಸಾಲೆ ರೊಟ್ಟಿ ಅಕ್ಕಿ ರೊಟ್ಟಿ(2ಸಾರಿ) ಈರುಳ್ಳಿ ಕಡ್ಲೆಬೇಳೆ ಉದ್ದಿನಬೇಳೆ। ಕೊತ್ತಿಮ್ಮೀರಿ ಸೊಪ್ಪು। ಸೇರಿಸಿದ ಮಸಾಲೆ ರೊಟ್ಟಿ ಸುವ್ವಲಾಲಿ॥6॥ಹಪ್ಪಳ ಸಂಡಿಗೆ ಪಲ್ಯಗಳ ಜೊತೆಗೆ। ಅನ್ನಸಾರು ಸಿಹಿ ಉಂಟು। ಸಂಭ್ರಮದ ಭೋಜನವಿದು। ಘಮಘಮಿಸುವ ರುಚಿಯ ಮೃಷ್ಟಾನ್ನವಿದು॥7॥

**ಸುಗ್ಗಿಯ ಕಾಲ ನಮದಾಯಿತಣ್ಣ 3** **ರಾಗ: ಖರಹರಪ್ರಿಯ-ಆದಿತಾಳ**

ಸುಗ್ಗಿಯ ಕಾಲ ನಮದಾಯಿತಣ್ಣ। ಹಿಗ್ಗಿ ಹಿಗ್ಗಿ ನಾವೂ ಕುಣಿಯೋಣ ಅಣ್ಣ।।ಪ।। ಚೈತ್ರಮಾಸದ ವಸಂತಋತುವೂ। ಬಂದೇ ಬಂದಿತು ನೋಡಿರಣ್ಣ। ತಂದಾನಿ ತಾನೋ ತಾನಿತಂದಾನ ತಂದಾನಿ ತಾನೂ ತಾನಿ।। ಪಚ್ಚೆಪೈರು ಕಣ್ಣಿಗ್ಹಬ್ಬವಾಗಿ। ಎಲ್ಲೆಲ್ಲಿ ನೋಡಿದರು ಕಾಣುವುದಣ್ಣ। ತೆನೆಯ ನೋಡಲು ಮುತ್ತು ತುಂಬಿದಂತೆ। ನಗುನಗುತಿರುವಂತೆ ಕಾಣುವುದಣ್ಣ।।1।। ರೈತ ಬಾಂಧವರು ತೆನೆಯನ್ನೆ ಕೊಯ್ದು। ಕಾಳುರಾಸೀ ಹಾಕಿ ಹಿಗ್ಗುವರಣ್ಣ। ತಾಯಿ ಮಾರಮ್ಮಗೆ ಎಡೆಯನ್ನೆ ಹಾಕಿ। ಕಾಯಿ ಕರ್ಪೂರವ ಹಚ್ಚುವರಣ್ಣ।।2।। ರಾಸೀಯ ಸುತ್ತ ರೈತ ಬಾಂಧವರು। ತಾಳ ಮದ್ದಲೆ ಪಿಡಿದು ಕುಣಿಯೋರಣ್ಣ। ತಾಯಿ ಮಾರಮ್ಮಗೆ ನಮಿಸುತ ರೈತರು। ಜನಪದ ಗೀತೆ ಹಾಡುವರಣ್ಣ। ತಂದಾನಿ ತಾನ ತಾನಿ ತಂದಾನೂ।।3।।

**ಸುಗ್ಗಿಯ ಕಾಲ ಬಂತು ಅಗ್ಗದ ದಿನ ಬಂತು** **ರಾಗ:ಶುದ್ಧಧನ್ಯಾಸಿ**

ಸುಗ್ಗಿಯ ಕಾಲ ಬಂತು ಅಗ್ಗದ ದಿನ ಬಂತು। ಸ್ವರ್ಗ ಭೂಮಿಗೆ ಬಂತು ನೋಡಣ್ಣ।। ಭತ್ತರಾಗಿ ಕೊಯ್ಲಿಗೆ ಬಂತು ಕೊಯ್ದ ಬೇಳೆಯು ಕಣಕ್ಕೆ ಬಂತು। ಎತ್ತ ನೋಡೆ ಹರುಷ ತಂತು ನಲಿಯಿರಣ್ಣಾ।। ಸುಗ್ಗಿ ಸುಗ್ಗಿ ಹೋಯ್ ಸುಗ್ಗಿ ಸುಗ್ಗಿ।।1।। ಹರಡಿ ಹುಲ್ಲು ಬಣಕ್ಕೆ ಚೆಲ್ಲಿ। ಜೋಡೆತ್ತಿನ್ ರೋಣಗಳನ್ನ ಅಲ್ಲಿ ಹೊಡ್ಸಿ। ತುಳಸ್ಯಾರ ದಿನವೆಲ್ಲಾ ಭತ್ತ ಹುಲ್ಲು ಬೇರೆ ಮಾಡಿ। ಧವಸ ಧಾನ್ಯವ ತೂರಾಡಿ। ರಾಶಿ ಪೂಜೆಯ ಮಾಡಿ ನಲಿವರೆಲ್ಲಾ।।2।। ದವಸ ಮನೆಗೆ ತುಂಬಿಸಿಕೊಂಡು। ರೈತರೆಲ್ಲಾ ಕೂಡಿಕೊಂಡು। ಊರ ದೇವರ ಒಲಿಸಿಕೊಂಡು ನಲಿಯಿರಣ್ಣಾ।। ಸುತ್ತ ನೋಡೆ ಗಿಳಿಗಳ ಹಿಂಡು। ಅಂಗೆ ನೀವು ಹೊಂದಿಕೊಂಡು। ಹೆಚ್ಚು ಬೆಳೆಯ ಬೆಳಕೊಂಡು। ನಲಿಯಿರಣ್ಣಾ।।3।।

**ಸುಗ್ಗಿಯು ಬಂದಿತು** **ರಾಗ: ಸಾವೇರಿ**

ಸುಗ್ಗಿಯು ಬಂದಿತು ಹಿಗ್ಗನ್ನೂ ತಂದೀತು। ನಮ್ಮಯ ನಾಡಿನ ಜನಕೆಲ್ಲ।।2ಸಾರಿ।। ಸಗ್ಗದ ಸುಖವನ್ನು ನೀಡುತ ರೈತಗೆ ದುಡಿಯಲು ಹಚ್ಚಿತು ದಿನವೆಲ್ಲಾ।।2ಸಾರಿ।। ಬೆಳೆಸಿಯ ತಿನ್ನುತ್ತಾ ಮಜ್ಜಿಗೆ ಕಡಿಯುತ್ತಾ ಇರುವರು ರೈತರು ಸುಖದಲ್ಲಿ।।2ಸಾರಿ।। ಜೋಳವ ಕೊಯ್ಯುತ್ತಾ ಗೂಡನು ಹಾಕುತಾ। ಕುಣಿವರು ರೈತರು ಹೊಲದಲ್ಲಿ।।2ಸಾರಿ।। ಕಣವನ್ನು ಕಡಿಯುತ್ತಾ ನೀರನ್ನು ಹೊಡೆಯುತ್ತಾ। ಮೇಟಿಯಾ ಕುಣಿಯನು ಅಗೆಯುವರು। ತೆನೆಯನ್ನು ಮುರಿಯುತ್ತಾ ಹೆಸರನ್ನು ಹೇಳುತ್ತಾ। ಗಂಪಿಯಾನೆಳೆಯುತ್ತಾ ಒಗೆಯುವರು।। ಹಂತಿಯಾ ಹೊಡೆಯುತ್ತಾ ಕಂಕಿಯಾ ತೆಗೆಯುತ್ತಾ। ಬೆಳಗಿನವರೆಗೂ ಹಾಡುವರು। ಕಾಳನ್ನುತೂರುತ್ತ ಗಾಡಿಗೆಹೇರುತ್ತಾ। ಊರಿನಕಡೆಗೆ ಓಡುವರು।।

**ಸುಗ್ಗೀಯ ಕುಣಿತಾವ** **ರಾಗ: ಮೋಹನ**

ಸುಗ್ಗೀಯ ಕುಣಿತಾವ ನಾವ್ ಕುಣಿಯೋಣ ಬನ್ನಿರೇ। ಸಗ್ಗದ ಸುಖವನ್ನೆ ನಾವ್ ಸವಿಯೋಣ ಬನ್ನೀರೆ।।ಪ।। ಕೆಂಪಾನೆ ಚೆಂಡನ್ನೇ ಕಾಣುವ ನಾವ್ ಬನ್ನೀರೆ। ಕೆಂಪಾನೆ ಭೂಮಿಗೆ ಹಸುರನ್ನೇ ತನ್ನಿರಿ। ಕಾಣದ ನಾವು। ಕೇಳದ ನಾವು ಕನ್ನಡ ದೀವಿಗೆ ಬೆಳಗೋಣ।।1।। ಭತ್ತದ ತೆನೆಯನ್ನು ಕಾಣುವ ನಾವ್ ಬನ್ನೀರೆ। ಕನಕದ ರಾಶಿಗೆ ಕುಂಕುಮವ ಹಚ್ಚೀರೆ। ಹಣತೆಗೆ ನಾವು ಜ್ಯೋತಿಗೆ। ನಾವು ಕನ್ನಡ ದೀಪವ ಬೆಳಗೋಣ।।2।। ಬೆಳ್ಳನೇ ಮೋಡವ ಕಾಣುವ ನಾವ್ ಬನ್ನೀರೆ। ತೆಳ್ಳನೇ ಮನದಲ್ಲಿ ಚಂದ್ರನ ಕಾಣಿರೆ। ಕಾಣದ ನಾವು ಕೇಳದ ನಾವು। ಕನ್ನಡ ಜ್ಯೋತಿಯ ಬೆಳಗೋಣ।।3।।

**ಹಾಯ್ ಸುಗ್ಗಿ ಹಾಯ್** **ರಾಗ: ಖರಹರಪ್ರಿಯ**

ಹಾಯ್ ಸುಗ್ಗಿ ಹಾಯ್।।3ಸಾರಿ।।ಪ।। ಸುಗ್ಗಿಯ ಮಾತೆಯು ಸಗ್ಗದ ಸುಖವ। ನೀಡುತ ಬಂದಿಹಳಾಯಿ।।ಅ.ಪ.।। ಕುಣಿಕುಣಿದಾಡುತ ನಲಿನಲಿದಾಡುತ। ಮಂದಹಾಸದಿಂ ಬಂದಿಹಳು। ಮುದದಿಂದ ನಮ್ಮೆಡೆಗೆ ಒಮ್ಮುದದಿಂದ ಈ

ಎಡೆಗೆ ಫಳ ಫಳ ಹೊಳೆಯುವ ಉಡಿಗೆಯ ತೊಟ್ಟು ಸರ ಸರ ಬಂದಿಹಳಾಯಿ....2ಸಾರಿ।।1।। ವಸಂತ ಋತುವಿನ ಚಿಗುರೆಲೆ ಬಳ್ಳಿಯ। ಘಮಘಮ ಹೂವಿನ ಪರಿಮಳದಿ। ಮನವೆಷ್ಟೋ ಹಾಯಾಗಿ ತನುವೆಷ್ಟೋ ಹಗುರಾಗಿ। ಬೇಡಿದ ವರಗಳ ಎಮ್ಮೆಯ ದೇವತೆ। ನೀಡುತ ಬಂದಿಹಳಾಯಿ।।2ಸಾರಿ।।2।।

### ಸುಗ್ಗಿ ಬಂತು ಸುಗ್ಗಿ

ಸುಗ್ಗಿ ಬಂತು ಸುಗ್ಗಿ। ರೈತ ಬಹಳ ಹಿಗ್ಗಿ। ಮೂಟೆ ಹೊತ್ತ ಬಗ್ಗಿ। ಸಂತೆ ಹೊಕ್ಕ ನುಗ್ಗಿ। ಮಾರಿದ ಭತ್ತ ಜಗ್ಗಿ। ಹಣ ಪಡೆದ ಹಿಗ್ಗಿ।।

## ನೃತ್ಯಗೀತೆ

### ಆಡ ಬನ್ನಿರೋ ಎಲ್ಲ ಓಡಿ ಬನ್ನಿರೋ (ಸಂಭಾಷಣಾಗೀತೆ) ರಾಗ: ಖರಹರಪ್ರಿಯ

ಆಡ ಬನ್ನಿರೋ ಎಲ್ಲ ಓಡಿ ಬನ್ನಿರೋ। ಭೂಮಿ ತಾಯಿ ಬೆಳೆದೌಳೆ ಹಾಡ ಬನ್ನಿರೋ ।।ಎಲ್ಲರು।। ಪಚ್ಚೆ ಪೈರ ಕೊಯ್ಯುತಿಲ್ಲಿ ಆಡಬನ್ನಿರೋ। ನೀವ್ ರಚ್ಚೆ ಮಾತನಾಡಿ ಕಾಲ ಕಳೆಯಬೇಡಿರೋ।। ಹೆಂಗಸರು।। ಬಿಮ್ಮನಸೇ ಹೆಣ್ಣಿನಂತೆ ಪೈರು ಬಂದಿದೆ। ಕೂಗಿ ಕರೆದು ಎಲ್ಲರನ್ನು ಕೊಯ್ಯಿರೆಂದಿದೆ।।ಗಂಡಸರು।। ಹೆಜ್ಜೆಗೊಂದು ಕಂತೆ ಪೈರ ಕಟ್ಟಬನ್ನಿರೋ। ನೀವ್ ಗೆಜ್ಜೆ ಕಟ್ಟಿ ಕೊಯ್ಯುತಿಲ್ಲಿ ಆಡಬನ್ನಿರೋ।।ಹೆಂಗಸರು।। ಕಾಡು ಬಿಟ್ಟು ಊರಸೇರ ಬಂದಾಳೆನಮ್ಮ ಕಾವೇರಿ ಊರನ್ನೆಲ್ಲಾ ನಗಿಸೌಳೆ।।ಗಂಡಸರು।। ಪಡುವಣ ಗಾಳಿಯಿಲ್ಲಿ ಬೀಸುತಲಿದೆ। ಕೂಗಿ ಕರೆದು ಎಲ್ಲರನ್ನು ಕೊಯ್ಯಿರೆಂದಿದೆ।।ಎಲ್ಲರೂ।। ಜಾತಿಗೀತಿ ಭೇದವೆಲ್ಲ ಬಿಟ್ಟು ಬನ್ನಿರೋ ನೀವು ಸಾಹುಕಾರ ಬಡವರೆಲ್ಲ ಮರೆತು ಬನ್ನೀರೋ।।ಹೆಂಗಸರು।। ಸತ್ಯಧರ್ಮದ ಹಾದಿಯಲ್ಲಿ ನಡೆದು ಬನ್ನಿರೋ। ಸಾಯೋತನಕ ಸುಖವನ್ನಿಲ್ಲಿ ಕಾಣಬನ್ನಿರೋ।।ಆಡ।।ಎಲ್ಲರೂ।।

### ಉಂಗುರ ಕಾಲ್ಗೆಜ್ಜೆ ರಾಗ: ಮೋಹನ

ಉಂಗುರ ಕಾಲ್ಗೆಜ್ಜೆ ಥಕಥಕಾ ಝುಣಝುಣ। ಥಕತೈಥ ಕುಣಿಯುತ್ತ ಬರುತಾಳೆ।।2ಸಾರಿ।। **ಪಾದಗರೀ ಸರಿಸರಿ ದಾ ಪದನೀ -ಸರಿಗರಿಸಾ।। ದಪಾ ದಗಾ ದಾಪಾ ನಿದಾ ನಿಪಾ ರೀಸಾ।** ಪನ್ನೀರಿನಲಿ ಮಿಂದು ಅತ್ತಾರು ಮಡಿಯುಟ್ಟು। ಕಸ್ತೂರಿ ಮೊಗಕಿಟ್ಟು ಬರುತಾಳೆ। ಸಿಂಗಾರಿ ಬರುತಾಳೆ ಬಂಗಾರ ತೊಡುತಾಳೆ। ಚೆಂಗಾವಿ ಜರತಾರಿ ಉಡುತಾಳೆ।।1।। ತಾಳ ಮದ್ದಲೆ ತಂಬೂರಿ ಜಾವಳಿ ನಾಟ್ಯ। ಹಿಮ್ಮೇಳ ಅಭಿನಯ ವೈಯ್ಯಾರಾ। ನೋಟ ಕೆನ್ನೆಯ ಮಾಟ ಬೇಟ ಕಂಗಳ ಕಾಟ। ಹಾವ ಬೇರಲಿ ನೋಟ ಕುಲುಕಾಟ।।2।। ಕುಲುಕಾಟ ಮಿಡುಕಾಟ ನಗುವಾಟ ನಲಿವಾಟ। ಕೊರಳ ಕೂಗುವ ಆಟ ಬಳುಕಾಟ।ಮುಂಗುರುಳ ಲೋಲೆ ವಾಟ ಮುಂಗೈಯ ಬಳುಕಾಟ ಚೆಂದುಳ್ಳಿ ತೆರೆವಾಟ। ಧಿತ್ತೋಂಥ ಝುಣತೋಂಥ ಥತ್ತೈಥ ಕಿಟಥೈಥ। ಧಿಮಿ ಧಿಮಿ ಧಿಮಿಕಿಟ ಝುಣಥೋಂಥ।।2ಸಾರಿ।।3।। ತಾಟಾರಿ ಬರುತಾಳೆ ಮೀಠಾರಿ ಬರುತಾಳೆ। ಚಿನ್ನಾರಿ ಬರುತಾಳೆ ರನ್ನಾರಿ।।4।।

### ಉತ್ತುಂಗ ನಾಡಿನಿಂದ ರಾಗ: ಮೋಹನ

ಉತ್ತುಂಗ ನಾಡಿನಿಂದ ಒಂದು ಹುಡುಗಿ ಬಂದಳವ್ವ। ಎಂಥ ಚೆಂದ ಕಾಣ್ತಾಳವ್ವ ಚೆಲುವೀಯವ್ವ।।ಪ।। ಅಂತಿಂಥ ಹುಡ್ಗಿ ಅಲ್ಲ ಇವ್ಳಂಥ ಹುಡ್ಗಿ ಇಲ್ಲ। ನಾಮತ್ತೆಲ್ಲು ಕಾಣೆ ನಮ್ಮವ್ವ।।ಅ.ಪ.।। ಹಸಿರು ಲಂಗ ಉಟ್ಟುಕೊಂಡು ಕೆಂಪು ರವಿಕೆ ತೊಟ್ಟುಕೊಂಡು। ಮೇಲೊಂದು ದಾವಣಿ ಹೊದ್ದುಕೊಂಡು। ಥಳುಕು ಬಳುಕುತಾ ನಡಿತಾಳವ್ವಾ। ತುಂಬು ಹರೆಯದ ವೈಯ್ಯಾರಿಯವ್ವಾ। ಅಂಥ ನಡಿಗೇಯಲ್ಲು ಎಂಥ ಚೆಂದ ಕಾಣ್ತಾಳವ್ವ ಚೆಲುವೀಯವ್ವ।।1।। ಕಾಲಿಗೆ ಘಲ್ ಘಲ್ ಗೆಜ್ಜೆಯ ಕಟ್ಟಿಕೊಂಡು। ಕೈಗೆ ಝುಣ ಝುಣ ಬಳೆಯ ತೊಟ್ಟುಕೊಂಡು। ದನಿಸ ದನಿಸ ಅಂತ ಹಾಡ್ತಾಳವ್ವ। ತಧಿಮಿ

ತಕಿಟ ಅಂತ ಕುಣಿತಾಳವ್ವ। ಅಂಥ ಕುಣಿತದಲ್ಲು ಎಂಥ ಚೆಂದ ಕಾಣ್ತಾಳವ್ವ ಚೆಲುವಿಯವ್ವಾ॥2॥ ಮಂದಿ ಅವಳ್ನ ಮುತ್ಕೊಂಡಾಗ ಎಲ್ಲರ ನಡುವೆ ಅವ್ಳಿರುವಾಗ। ದಾರೀಯ ಬಿಡಿರೆಂದು ಬೇಡಿದಾಗ। ಯಾವ್ದೋ ಕಿಲಾಡಿ ಮಾತ್ನಾಡ್ಸದಾಗ। ಎಂಥ ಸಿಟ್ಟನ್ನು ತೋರಿದ್ಲಂತ ಅಂಥ ಸಿಟ್ಟೀನಲ್ಲು ಎಂಥ ಚೆಂದ ಕಾಣ್ತಾಳವ್ವ ಚೆಲುವಿಯವ್ವಾ॥

### ಊರಿಗೆ ಜನ ಬಂದವ್ರೆ — ರಾಗ: ಶ್ರೀರಾಗ

ಊರಿಗೆ ಜನ ಬಂದವ್ರೆ ಉಟ್ಟುಕೊಳ್ಳೆ ಸೀರೇಯ। ತೊಟ್ಟುಕೊಳ್ಳೆ ಸಣ್ಣ ರವಿಕೇಯ ॥2ಸಾರಿ॥ ಲಕ್ಕವ್ವ ಹೊತ್ತುಕೊಳ್ಳೆ ಹೊನ್ನ ಕಲಶಾವಾ। ತಂದಾನೋ ತಾನಾನೋ ತಂದಾನ ತಾನೋ ಥೈಯತಾನೊ। ಬಾಗಿಲು ಚಿಕ್ಕದು ಬಗ್ಗಿ ಬಾರೆ ಲಕ್ಕವ್ವ। ಭಾಗ್ಯ ಉಳ್ಳವನೆ ನಿನ್ನ ಮಗ॥2ಸಾರಿ॥ ಲಕ್ಕವ್ವ ಭಾಗ್ಯದ ಮುತ್ತ ಕೊಡುವ್ಹೋಳೆ॥ ತಂದಾನೋ.......॥ ಉಂಗುರದ ಕಾಲ ಊರುತ್ತ ಜಾರುತ್ತ। ಬಂಗಾರದಿ ನಡಿಗೆ ನಡೆಯುತ್ತ। ಲಕ್ಕವ್ವ ಬಂದಾಳೆ ಮನೆಯ ಹೊಸಿಲೀಗೆ॥ ತಂದಾನೋ....॥

### ಎಲೆ ಕೆಂಚಿ ತಾರೇ (ಸಂಭಾಷಣಾಗೀತೆ)

ಗಂಡು: ಎಲೆ ಕೆಂಚಿ ತಾರೇ ನಮ್ ಮನೆ ತನಕ ಬಾರೇ। ನೀ ಬಾರದೆ ಹೋದರೆ । ನಾ ಕೆರೆಬಾವಿ ಪಾಲೆ। ಹೆಣ್ಣು: ಕಲ್ಲು ಕಟ್ಟಿದ ಬಾವಿ ಬೆಲ್ಲದ ಸೋಪಾನ। ಊರೆಲ್ಲ ಬಳಸುವುದು ಆ ನೀರೆ। ಬಾರೋ ಮನೆಗೆ ಹೋಗೋಣ। ಗಂಡು: ಎಲೆ ಕೆಂಚಿ ತಾರೆ - ನಮ್ ಮನೆ ತನಕ ಬಾರೆ। ಅತ್ತಲಿಂದ ನಾನು ಬಂದೆ-ಇತ್ತಲಿಂದ ನೀನು ಬಂದೆ। ನಿನ್ನ ಮಾರೆ ಮುಸುಕು ತೆಗೆಯೇನೆ। ಮಾರೆಯ ನೋಡೋಣ। ಬಾರೆ ಮನೆಗ್ ಹೋಗೋಣ। ಹೆಣ್ಣು: ಸುಣ್ಣದ ನೆಪ ಮಾಡಿ ಸುಳಿದಾಡೊ ಮನೆ ಮುಂದೆ। ನಿನ್ನಿಂದ ಮನ್ನಿಂದ (ನೆನ್ನೆ ಮೊನ್ನೆ) ನಾ ಬಲ್ಲೆ ಜಾಣ। ಬಾರೋ ಮನೆಗ್ ಹೋಗೋಣ। ಗಂಡು: ಬಾಗೆ ಹೊಡೆದರೆ ಹೆಂಟೆ - ಜಾಲಿ ಬಡಿದರೆ ಚಕ್ಕೆ। ನಿನ್ನ ಗಲ್ಲ ಕಡಿದರೆ ಬೆಲ್ಲದಚ್ಚೆ। ಬಾರೇ ಮನೆಗ್ ಹೋಗೋಣ। ಹೆಣ್ಣು: ಊರೆಲ್ಲ ನಕ್ಕಾರು ತುಂಬಿದ ಮನೆ ನಮ್ದು। ಬಂದು ಹೆಣ್ಣ ಕೇಳೋ ನೀ ಬಂದು ಹೆಣ್ಣ ಕೇಳೋ - ಬಾರೋ ನಮ್ಮ ಮನೆಗೆ ನೀ ಬಾರೋ ನಮ್ಮ ಮನೆಗೆ। ಗಂಡು: ನಡುವಿಗೆ ಒಡ್ಯಾಣ ಮಾಡಿಸಿಕೊಡುವೆನು। ಕಾಲಂದುಗೆ ಗೆಜ್ಜೆ। ಕೆಂಚಿ ನಿನ್ನ ಕೈಗೆ ಹಿಡಿಹೊನ್ನ ಕೊಟ್ಟೆ। ಬಾರೆ ಮನೆಗೆ ಹೋಗೊಣ। ಹೆಣ್ಣು: ಅಕ್ಕ ತಂಗಿಯರು ನಾವು ರೊಕ್ಕ ಕೇಳೋವ್ರಲ್ಲ। ನಿನ್ನ ಮೇಲೆ ಬಿತ್ತಲ್ಲೊ ನನ್ನ ಗ್ಯಾನ। ಬಾರೋ ಮನೆಗ್ ಹೋಗೋಣ। ಗಂಡು: ಕೆಂಚಿ ನೀನು ನಮ್ ಮನೆಗ್ ಬಂದಾರೆ। ನಮ್ಮ ತೆರೆ ಬಂದಾಗ್‌ತೈತೆ। ಬರುವೆ ನಿಮ್ಮ ಮನೆಗೆ - ನಾನು ಬರುವೆ ನಿಮ್ಮ ಮನೆಗೆ। ಎಲೆ ಕೆಂಚಿ ತಾರೆ ನಮ್ ಮನೆ ತನಕ ಬಾರೆ - ನಮ್ ಮನೆ ತನಕ ಬಾರೇ॥

### ಓಡೋಡಿ ಬನ್ನಿರಯ್ಯ ಹೊಲಕೆ — ರಾಗ: ಕಾಮವರ್ಧಿನಿ

ಓಡೋಡಿ ಬನ್ನಿರಯ್ಯ ಹೊಲಕೆ ॥2ಸಾರಿ॥ ಹಾಡುತ್ತ ಪಾಡುತ್ತ ಪೈರನ್ನು ಕೊಯ್ಯುತ್ತ ಹಾಡುತ್ತ ಪಾಡುತ್ತ ಪೈರನ್ನು ಕೊಯ್ಯುವ। ಗಟ್ಟಿಯಾಗಿ ಮುಡಿಯ ಕಟ್ಟುವಾ ಹೊಯ್ ಹೊಯ್॥1॥ ಕುಟ್ಟುತ್ತಾ ಕೇರುತ್ತ ಅಕ್ಕಿಯ ಮಾಡುತ। ಕುಟ್ಟುತ್ತ ಕೇರುತ್ತ ಅಕ್ಕಿಯ ಮಾಡುತ್ತಾ। ರಾಶಿಯ ನಾವು ಮಾಡುವ ಹೊಯ್ ಹೊಯ್॥2॥ ಕೊಯ್ಲಿನ ಕೆಲಸವು ಮುಗಿಯಿತು ಇಲ್ಲಿ। ಕೊಯ್ಲಿನ ಕೆಲಸವು ಮುಗಿಯಿತು ಇಲ್ಲಿ। ಹಬ್ಬದೂಟವ ನಾವು ಮಾಡುವ ಹೊಯ್ ಹೊಯ್॥3॥

### ಕಬ್ಬಿನ ಹೊಲ ಕೆರೆದಾಗ (ಸಂಭಾಷಣಾ ಗೀತೆ) — ರಾಗ: ಮೋಹನ

ಕಬ್ಬಿನ ಹೊಲ ಕೆರೆದಾಗ ಮುತ್ತಿನ ಸೆರಗ ಪಿಡಿದವನೆ। ಮುತ್ತಿನ ಸೆರಗ ಬಿಡೋ। ರಂಗಯ್ಯ ರಂಗ ಮುತ್ತಿನ ಸೆರಗ ಬಿಡೋ ॥ಪ॥ ಕರಿಯ ಕಾಳಿಂಗನ ಸುತ್ತಿ ಸಿಂಬೆಯನೊಂದು ಮಾಡಿ ಹೊತ್ತಾಳೊಂದ್ ಹಾಲ್ ಕೊಡವಾ। ಗೊಲ್ಲತೀ ಹೊತ್ತಾಳೊಂದ್ ಮೊಸರ್ ಕೊಡವಾ॥1॥ ಎತ್ತು ಎಮ್ಮೆಗೆ ಸುಂಕ ಭತ್ತಾಭರಣಕೆ ಸುಂಕ ಹಾಲಿಗೆ ಸುಂಕವೇನೋ। ರಂಗಯ್ಯಾ ಮೊಸರಿಗೆ ಸುಂಕವೇನೋ॥2॥ ಹಾಗೆಂದ ಮಾತಿಗೆ ಥಕ್ಕನೆ ಎದ್ದನು ಸೆರಗನ್ಬಿಡಿದು ಜಗ್ಗಿದಾ ರಂಗಯ್ಯಾ

ಸೆರಗನ್ಹಿಡಿದು ಜಗ್ಗಿದಾ। ತಮ್ಮಾನೆ ಬಿಡೋ ಸೆರಗ ತಮ್ಮಯ್ಯ ಬಿಡೋ ಸೆರಗ। ತಮ್ಮಾ ನೀ ಸೆರಗಾ ಬಿಡೋ ರಂಗಯ್ಯಾ ತಮ್ಮಾ ನೀ ಸೆರಗಾ ಬಿಡೋ॥3॥ ತಮ್ಮಾನು ನಾನಲ್ಲ, ತಮ್ಮಯ್ಯೂ ನಾನಲ್ಲ, ತಮ್ಮಾನ ಭಾವಕಾಣೇ, ಗೊಲ್ಲತೀ ನಿನ್ ತಮ್ಮಾನ ಭಾವಕಾಣೆ॥4॥ ಅಣ್ಣಾ ಬಿಡೋ ಸೆರಗ, ಅಣ್ಣಯ್ಯ ಬಿಡೋ ಸೆರಗ ಸುಮ್ಮಾನೆ ಸೆರಗಾ ಬಿಡೋ ರಂಗಯ್ಯಾ ನಮ್ಮಣ್ಣಯ್ಯಾ ಸೆರಗಾ ಬಿಡೋ॥5॥ ಅಣ್ಣಾನು ನಾನಲ್ಲ ಅಣ್ಣಯ್ಯು ನಾನಲ್ಲ ಅಣ್ಣಾನ ಭಾಮೈದನೇ -ಗೊಲ್ಲತೀ ನಿಮ್ಮಣ್ಣನ ಭಾಮೈದನೇ॥6॥ ಭಂಡಾ ಬಿಡೋ ಸೆರಗ, ಭಂಡಯ್ಯ ಬಿಡೋ ಸೆರಗ, ಭಂಡಾ ನೀ ಸೆರಗ ಬಿಡೋ.....। ರಂಗಯ್ಯ ಬಲು ಭಂಡಾ ನೀ ಸೆರಗಾ ಬಿಡೋ॥7॥ ಭಂಡಾನು ನಾನಲ್ಲ, ಭಂಡಯ್ಯು ನಾನಲ್ಲ ಭಂಡರ ಗಂಡ ಕಾಣೆ ಗೊಲ್ಲರ ಭಾಮೆ ನಾ ಭಂಡರ ಗಂಡ ಕಾಣೆ ॥8॥ ಅಪ್ಪಾ ಸೆರೆಗ ಬಿಡಪ್ಪಯ್ಯ ಸೆರಗ ಬಿಡಪ್ಪಯ್ಯ ಸೆರೆಗಾ ಬಿಡೋ ರಂಗಯ್ಯ ನಮ್ಮಪ್ಪಾ ಸೆರಗಾಬಿಡೋ॥9॥ ಅಪ್ಪಾನು ನಾನಲ್ಲ ಅಪ್ಪಯ್ಯ ನಾನಲ್ಲ ಅಪ್ಪನ ಅಳಿಯಾ ಕಣೇ ಗೊಲ್ಲತಿ ನಿಮ್ಮಪ್ಪನಾ ಅಲಿಯಾಕಳೆ॥10॥ ಕಂದ ಸೆರಗ ಬಿಡು ಕಂದಯ್ಯ ಸೆರಗ ಬಿಡು ಕಂದಾ ಸೆರಗ ಬಿಡೋ॥11॥ ಕಂದಾನು ನಾನಲ್ಲ ಕಂದಯ್ಯ ನಾನಲ್ಲ ಕಂದಾನ ತಂದೆ ಕಾಣೆ ಗೊಲ್ಲತಿ ನಿನ್ ಕಂದಾನ ತಂದೆ ಕಾಣೆ॥12॥ ಹಾಗಂದ ಮಾತಿಗೆ ಫಕ್ಕನೇ ಎದ್ದಳೇ। ತಬ್ಬಿ ಕೊಂಡಳೆ ಕೃಷ್ಣನಾ ಗೊಲ್ಲತೀ ತಬ್ಬಿಕೊಂಡಳೆ ಕೃಷ್ಣನಾ॥13॥

**ಕುದುರೆಯ ತಂದಿವ್ನಿ (ಸಂಭಾಷಣಾ ಗೀತೆ)** **ರಾಗ: ತಿಲಂಗ್**

ಕುದುರೆಯ ತಂದಿವ್ನಿ ಜೀನಾವ ಬಿಗಿದಿವ್ನಿ। ಬರಬೇಕು ತಂಗಿ ಮದುವೇಗೆ॥ಪ॥ ಅಂಗ್ಳ ಗುಡಿಸೋರಿಲ್ಲ ಗಂಗ್ಳ ತೊಳೆಯೋರಿಲ್ಲ। ಹೆಂಗೇ ಬರಲಣ್ಣ ಮದುವೇಗೆ? ಅಂಗ್ಳಕ್ಕೆ ಆಳಿಡುವೆ ಗಂಗ್ಳಕ್ಕೆ ತೊತ್ತಿಡುವೆ। ಬರಬೇಕು ತಂಗಿ ಮದುವೇಗೆ॥ ಮಜ್ಗೆ ಕಡೆಯೋರಿಲ್ಲ ಬೆಣ್ಣೆ ತೆಗೆಯೋರಿಲ್ಲ। ಹೇಗೆ ಬರಲಣ್ಣ ಮದುವೇಗೆ? ಮಜ್ಗೇಗೆ ಆಳಿಡುವೆ ಬೆಣ್ಣೆಗೆ ತೊತ್ತಿಡುವೆ ಬರಬೇಕು ತಂಗಿ ಮದುವೇಗೆ॥ ಬೇಸಿಗೆ ಬಿಸಿಲಣ್ಣ ಕೂಸಿನ ತಾಯಣ್ಣ ಹ್ಯಾಗೇ ಬರಲಣ್ಣ ಮದುವೇಗೆ? ಪಲ್ಲಕ್ಕಿ ತರಿಸುವೆ ತೊಟ್ಟಿಲ ಇಡಿಸುವೆ ಬರಬೇಕು ತಂಗಿ ಮದುವೇಗೆ॥ ಮಳೆಯಾರ ಬಂದೀತು ಹೊಳೆಯಾರ ತುಂಬೀತು। ಹೇಗೆ ಬರಲಣ್ಣ ಮದುವೇಗೆ? ಚಿನ್ನದ ಹರಿಗೋಲ್ಗೆ ರನ್ನದ ಹುಟ್ಟಿಡುವೆ ಬರಬೇಕು ತಂಗಿ ಮದುವೇಗೆ॥ ಅಪ್ಪ ಕಟ್ಟಿದ ಮನೆಯು ಅಮ್ಮ ಮಾಡಿದ ಬದುಕು ಬರಬೇಕು ತಂಗೀ ಮದುವೇಗೆ॥ ಅಪ್ಪ ಇದ್ದರೆ ಎನ್ನ ಒಪ್ಪದಿ ಕರೆದೊಯ್ವ ಅಪ್ಪ ಇಲ್ಲದ ಮನೆಯೊಲ್ಲೆ। ಅಮ್ಮ ಇದ್ದರೆ ಎನ್ನ ಸುಮ್ಮನೆ ಕಳುಹ್ಯಾಳೆ ಅಮ್ಮ ಇಲ್ಲದ ಮನೆಗೆ ಬರಲ್ವೇಗೆ? ಬಂದಾರೆ ಬಂದೇನು ಬಾಕ್ಲಾಗೆ ನಿಂದೇನು ಕಂದಂಗೆ ಧಾರೆ ಎರೆದೇನು॥ ಕಂದಂಗೆ ಧಾರೆ ಎರೆದೇನು ಅಣ್ಣಯ್ಯ ಬಂದೇ ಬರುತೀನಿ ಮದುವೇಗೆ॥

**ಗಾಡಿ ಬೇಗ ಸಾಗಲಿ** **ರಾಗ: ಮೋಹನ**

ಗಾಡಿ ಬೇಗ ಸಾಗಲಿ ದೂರದೂರು ಸೇರಲಿ। ಹೂಡಿಹುದು ಹೊಸಬಂಡಿ, ಹೊರಟೈತೆ ಹೊಸಗಂಡು। ಆಲೈಸಿ ಕೇಳೋ ಬಸವಣ್ಣಾ॥2ಸಾರಿ॥ದೂರದ ಊರಲ್ಲಿ ಬೀಗರ ಮನೆಯಲ್ಲಿ ನೂರಾರು ಗರತಿಯರ ಜೊತೆಯಲ್ಲಿ॥2ಸಾರಿ॥ ಹೊಸಹೆಣ್ಣು ಕುಂತೈತೆ ಹತ್ತಾಸೆ ಹೊತ್ತೈತೆ। ಆಲೈಸಿ ಕೇಳೋ ಬಸವಣ್ಣಾ॥2ಸಾರಿ॥ ಹತ್ತಿರದ ಬಲುಕಾಡು ಎತ್ತರದ ಗಿರಿನೋಡು। ಸುತ್ತಲು ತುಂಬಿಹುದು ಹಕ್ಕಿಯ ಹಾಡು। ಹೊತ್ತು ಮುಳುಗುವ ಮುನ್ನ ಊರ ಸೇರೋದು ಚೆನ್ನ। ಆಲೈಸಿ ಕೇಳೋ ಬಸವಣ್ಣಾ॥2ಸಾರಿ॥ ಹೆಣ್ಣಿನ ತವರೂರು ನೆಂಟರು ನೂರಾರು। ನಮ್ ಬೀಗರ ಮನೆ ಬಲುಜೋರು। ತುಂಬಿದೆ ಆನಂದ ನಡೆನುಡಿ ಬಲುಚೆಂದ ಆಲೈಸಿ ಕೇಳೋ ಬಸವಣ್ಣ॥2ಸಾರಿ॥

**ಗಿರಿಯ ನವಝುರಿಯ** **ರಾಗ: ಶಂಕರಾಭರಣ ನೋಟ್**

ಗಿರಿಯ ನವಝುರಿಯ ಜಲಮೀಯುವ ಬನ್ನಿ। ಕುಣಿಕುಣಿದು ನಲಿನಲಿದು ಹಾಡುವ ಬನ್ನಿ॥ಪ॥ ಬಲುಬೇಗ

ಶಿಖರವೇರಿ ಪರಶಿವನ ಪೂಜೆ ಮಾಡಿ। ಪರಿಪರಿಯ ವರವಬೇಡಿ ದಿನಚರಿಯ ಮಾಡಬನ್ನಿ। ಪರಮೇಶನಾಥನೆ ನಮ್ಮ ಬಾಳ ಸಾಗಿಪಾ। ಕುಣಿಯೋಣ ನಲಿಯೋಣ ಬಾಳ್ ಸವಿಯೋಣ ಬಾ। ಅಂದಾದ ಊರ ಸೇರುವ ಬಾ, ಚಂದಾದ ಕಾಲ ಕಾಣುವ ಬಾ। ಜನದ ಮನಸುಮದ ಕದ ತೆರೆಯುವ ಬನ್ನಿ। ಜಲನೆಲದ ಮಧುರತೆಯ ಹೀರುವ ಬನ್ನಿ॥1॥ ಮತಭೇದ ಮುನಿಸನೆಂಬ ಮಲಿನತೆಯ ಸಾಗಹಾಕಿ। ಜನಮನವ ನಿಲಯ ಮಾಡಿ ಜಗಜ್ಯೋತಿ ಬೆಳಗ ಬನ್ನಿ। ಜಗದೀಶನಾಥನೆ ಬಾಳ್ ಬೆಳಕು ನೀಡುವ। ಕುಣಿಯೋಣ ನಲಿಯೋಣ ಮೈ ಮರೆಯೋಣ ಬಾ। ಅಂದಾದ ಊರ ಸೇರುವ ಬಾ ಚಂದಾದ ಕಾಲ ಕಾಣುವ ಬಾ॥2॥

**ಚೆಲ್ಲಿದರೂ ಮಲ್ಲಿಗೆಯಾ** **ರಾಗ: ಸಿಂಧುಭೈರವಿ**

ಚೆಲ್ಲಿದರೂ ಮಲ್ಲಿಗೆಯಾ ಬಾಣಾಸುರೇರಿ ಮ್ಯಾಗೆ। ಅಂದಾದ ಚೆಂದಾದ ಮಾಯ್ಗಾರ ಮಾದೇವ್ಗೆ ಚೆಲ್ಲಿದರು ಮಲ್ಲಿಗೆಯ॥ ಏಳು ಮಲೆಯಲ್ಲಿ ಏನಯ್ಯ ಕೆಂಧೂಳು। ನವಿಲ್ಯಾಡಿ ನವುಲ ಮರಿಯಾಡಿ ಮಾದೇವ್ಗೆ॥1॥ ನವಿಲ್ಯಾಡಿ ನವುಲ ಮರಿಯಾಡಿ ಮಹದೇವ್ಗೆ। ಹಬ್ಬ ಮಾಡಿ ಗಿರಿಗೆ ಹೊರಟಾರು॥ಚೆಲ್ಲಿದರು॥ ಮಲ್ಲಿಗ್ಹೂವಿನ ಮಂಚ ಮರುಗಾದ ಮೇಲೊದಪು। ತಾವರೆ ಹೂವ ತಲೆದಿಂಬು ಮಹದೇವ್ಗೆ॥2॥ ತಾವರೆ ಹೂವಿನ ತಲೆದಿಂಬು ಮಹದೇವ್ಗೆ। ಅಲ್ಲೊಂದು ಘಳಿಗೆ ಸುಖನಿದ್ರೆ ಮಹದೇವ್ಗೆ॥3॥ ಮಾದಪ್ಪ ಬರುವಾಗಾ ಮಾಳೆಲ್ಲ ಘಮ್ಮೆಂದಿತೊ। ಮಾಳದಲಿ ಗರುಕೆ ಚಿಗುರ್‍ಯಾವೆ ಮಾದೇವ್ಗೆ॥4॥ ಸಂಪಿಗೆ ಹೂವ್ನಂಗೇ ಇಂಪಾದೋ ನಿನ್ನ ಪರುಸೆ। ಕೌದಳ್ಳಿ ಬಯಲಾಗೆ ನಿನ್ನ ಪರುಸೆ ॥5॥ ಹೊತ್ತು ಮುಳುಗಿದರೇನು ಕತ್ತಲಾದರೇನು। ಅಪ್ಪಾ ನಿನ್ ಪರ್ಸೇಗೆ ಬರ್‍ತೇವು ನಾವು॥6॥

**ಜಕ್ಕಣಕ್ಕಣಕ್ಕಜಕ್ಕ2 ಜೀವನವೆಲ್ಲ** **ರಾಗ: ಮಧ್ಯಮಾವತಿ**

ಜಕ್ಕಣಕ್ಕಣಕ್ಕಜಕ್ಕ ಜಕ್ಕಣಕ್ಕಣಕ್ಕಜಕ್ಕ।2ಸಾರಿ। ಜೀವನವೆಲ್ಲ ಬೇವು ಬೆಲ್ಲ ಬಲ್ಲವರೆಲ್ಲ ಬಲ್ಲಿದರಲ್ಲ। ಕಷ್ಟಸುಖ ಸಿಹಿ ಕಹಿ ಸಮವೆಲ್ಲಾ॥2ಸಾರಿ॥ ಬೆಟ್ಟದೊಡೆಯ ಮಲ್ಲಯ್ನ ದಯವಿರೆ ಭಯವಿಲ್ಲ॥2ಸಾರಿ॥ಜಕ್ಕಣಕ್ಕ॥ ಸಾಗರತೋರ ಕೆಂಡದಂತೆ ರಾಮನು ಬಿಟ್ಟ ಬಾಣದಂತೆ। ಹೋರಾಡಿ ಬರುತಾನೆ ರಣಧೀರ॥2ಸಾರಿ॥ಮಾಯಾಗಾರ। ಹನುಮಪ್ಪ ಸ್ವಾಮಿ ಮಾಲೆಕಾರ ॥1॥ ಬಿಳಿಯ ಕುದುರೆ ಏರಿಕೊಂಡು ಬಿಲ್ಲು ಬಾಣ ಹೂಡಿಕೊಂಡು। ಹುಲಿಬೇಟೆ ಗ್ಹೊರಟ ಭೂಪ ಬಾಣಶೂರ॥2ಸಾರಿ॥ ಮಾಯಗಾರ ಮಾಗಡಿಯ ರಂಗನಾಥ ಬೇಟೆಗಾರ ॥2॥ ಮಾದ್ಯೆಸ್ವಾಮಿ ಬರುವಾಗ ಮಾಡೆಲ್ಲ ಘಮ್ಮೆಂದು। ಹುಲ್ಲೆಕರು ಹುಲಿಮರಿ ಜೊತೆಯಾಗಿ ॥2ಸಾರಿ॥ ಎದ್ದುಬಾರೆ। ಮಾದ್ಯೆನ ಪುರಕೆ ಹಸನಾಗು ॥3॥ ಮುತ್ತಿನಗೆಜ್ಜೆ ಬಿಟ್ಟುಬಾರೆ ಚಂದಗಾತಿ ಚಾಮುಂಡಿ। ಘಮನಾದ ಜಾಜಿ ಮೊಗ್ಗು ಅರಳ್ಯಾವೆ॥ 2ಸಾರಿ॥ ಚಾಮುಂಡಿ ಸುತ್ತಾಲು ಬೆರೆಸಿ ಮೆರೆದ್ಯಾವೆ॥4॥ ಕಾಲಿನ ಗೆಜ್ಜೆ ಘಲಿರೆಂದು ಮುತ್ತಿನ ಬಳೆ ಭಳೀರೆಂದು। ಗಮ್ಮಾದ ಘಂಘಂ ಘಂಮ್ಮೆಂದು॥2ಸಾರಿ॥ ಜಗಕ್ಕೆಲ್ಲಾ ಕಂಪಾದ ವಾಸನೆ ತುಂಬಿತ್ತು॥5॥ಜಕ್ಕಣ ಕ್ಕಜಕ್ಕ॥

**ದಂಡೆ ತಾರೋ ದಂಡೆ ಸ್ವಾಮಿ** **ರಾಗ: ಮೋಹನ**

ದಂಡೆ ತಾರೋ ದಂಡೆ ಸ್ವಾಮಿ। ದಂಡೆ ಮುತ್ತಿನ ದಂಡೆಗಳಾ॥ಪ॥ ನಾಗರ ತಳಕಿಕ್ಕೊಂಡು ನಲ್ಲೆಮ್ಮೆ ಮೆಯ್ಸೋನೆ। ಗೊಲ್ಲರ ಮಗನೇ ಶ್ರೀಕೃಷ್ಣ ನಿನ್ನೆಮ್ಮೆ ಮಲ್ಲಿಗೆ ವನವಾ ತುಳಿದಾವು॥1॥ ತುಳಿದರೆ ತುಳಿಯಲಿ ಹೊಡೆಹುಲ್ಲ ಮೇಯಲಿ। ಸಾಕೆಂಬೋ ಹಾಲ ಕರೆಯಾಲಿ॥ ಲೋಕದ ಭಂಗ ಬಡತನ ಹರಿಯಾಲಿ॥2॥ ಮೊಸರಾ ಕಡೆವಾಗ ಹೊಸಮುತ್ತು ಗಲಿರೆಂದೋ। ಬಚ್ಚಣಿಕೆ ಕಂಭಾ ಬಳುಕೀದೋಳ್। ಗೋಕುಲದ ಮುತ್ತೈದೇರ್ ಮೊಸರಾ ಕಡೆದಾರು॥3॥ ಸಾಕೆಂಬೋ ಹಾಲಿಗೆ ಸಣ್ಣ ಮಂತಿನ ಕೋಲು। ವಜ್ರಮಾಣಿಕದ ಗುದಿಕಣ್ಣಿಟ್ಟಿಡಕೊಂಡು ಗೋಪಮ್ಮ ಮೊಸರಾ ಕಡೆದಾಳು॥4॥

**ನಮ್ಮೂರ ಜಾತ್ರೆಗೆ ಬಂದುಹೋಗ** **ರಾಗ: ಪುನ್ನಾಗವರಾಳಿ**

ನಮ್ಮೂರ ಜಾತ್ರೆಗೆ ಬಂದು ಹೋಗ ಜಾಣ। ಒಂದು ದಿನದ ಮಟ್ಟಿಗೆ ನಿಂದು ಹೋಗಾ॥ ತಂದಾನಿ ತಾನೊ ತಂದನಾನೊ

ತಂದಾನಿ ತಾನೊ ತಂದನಾನೊ। ಜೋಡಿ ಬಂಡಿ ಹೂಡಿ, ಗಂಡ ಮಕ್ಕಳ ಕೂಡಿ। ಸುತ್ತೂರು ನೆಂಟರ ಜೊತೆಗೂಡಿ। ಹುಟ್ಟೂರು ಸೇರಿ ಎತ್ತಿ ನನ್ನ ನೋಡುವ। ಮುತ್ತೈದೆ ಮೊಗವ ನೋಡುಬಾರ॥1॥ ತಾಯ ಕಳಸವು ಚೆನ್ನ ಗುಡಿಸುತ್ತ ತೋರಣ। ಗುಡಿಯಾ ಪೌಳಿಗೇ ಬಗಿಬಣ್ಣ। ಹಾಡೇ ಮಂಗಳಗಾನ ಮಾಡೇ ಮಂಗಳ ಸ್ನಾನ। ಏರಿ ಹೊರಟ್ಯಾಳೇ ಬೆಳ್ಳಿ ಪಲ್ಲಕ್ಕಿ॥2॥ ಕೋಲು ಹಾಕೋದು ಚೆನ್ನ ಮ್ಯಾಳ ಊದೋದು ಚೆನ್ನ। ಡೊಳ್ಳು ಕುಣಿತಾವೇ ಬಲು ಚೆನ್ನ। ತೇರು ಹರಿಯೋದು ಚೆನ್ನ ದ್ಯಾವ್ರು ಕುಣಿಯೋದು ಚೆನ್ನ। ಊರಾ ಜಾತ್ರೆಯೂ ಮನಕಾನಂದ॥3॥ ಅಡ್ಡ ಪಲ್ಲಕ್ಕಿ ಏರಿ ಮನೆಗೇ ಮಡ್ಲಕ್ಕಿ ತೂರಿ। ಊರಾ ಸುತ್ತಾಡುತ್ತಾಳೆ ಮಹತಾಯಿ। ಕುರಿಕೋಳಿ ಬಲಿಉಂಡು ಬರುವ ಕಷ್ಟವ ಕೊಂಡು। ಮನದ್ಯಾವ್ರ ಜೊತೆಗೆ ನಡಿತಾಳೆ॥4॥

## ನಿನ್ನ ಮಗನ ಲೂಟಿ ಘನವಮ್ಮ — ರಾಗ: ಆನಂದಭೈರವಿ

ನಿನ್ನ ಮಗನ ಲೂಟಿ ಘನವಮ್ಮ ಗೋಪೀ ಕರೆದು ಕೃಷ್ಣಗೆ ಬುದ್ಧಿ ಹೇಳಮ್ಮಾ॥ಪ॥ ಮೂರಾಳು ಸ್ತ್ರೀಯರು ಗೋಪಮ್ಮ ನಾವು ನೀರಿಗೆ ಹೋಗುತಿದ್ವು ಗೋಪಮ್ಮಾ॥ ಹಾರಿ ಹಾರೀ ಬಂದು ಗೋಪಮ್ಮ-ನಮ್ಮ ನೀರಾ ಕೊಡಗಳೊಡೆದ ಗೋಪಮ್ಮ॥1॥ ಆರಾಳು ಸ್ತ್ರೀಯರು ಗೋಪಮ್ಮ-ನಾವು ಮೊಸರು ಮಾರುತ ಬಂದೊ ಗೋಪಮ್ಮ॥ ವಾರೆ ವಾರೇಲಿ ಬಂದು ಗೋಪಮ್ಮ-ನಮ್ಮ ಮೊಸರು ಬೆಣ್ಣೆ ತಿಂದ ಗೋಪಮ್ಮ॥2॥ ಎಂಟಾಳು ಸ್ತ್ರೀಯರು ಗೋಪಮ್ಮಾ ನಾವು ಬೆಣ್ಣೆ ಮಾರುತ ಬಂದಾಗ ಗೋಪಮ್ಮಾ॥ ಬಿಂಕದಿಂದಲೆ ಬಂದು ಗೋಪಮ್ಮಾ- ನಮ್ಮ ಬೆಣ್ಣೆ ಮೊಸರು ತಿಂದ ಗೋಪಮ್ಮಾ॥3॥ ಹನ್ನೆರಡು ಸ್ತ್ರೀಯರು ಗೋಪಮ್ಮಾ- ನಾವು ತಾನಾವ ಮಾಡುತಿದ್ವು ಗೋಪಮ್ಮಾ॥ ಸೀರೆನೆಲ್ಲವ ಕದ್ದು ಗೋಪಮ್ಮಾ-ನಮ್ಮ ಕಣ್ಣ ಸನ್ನೆಲಿ ಕರೆದ ಗೋಪಮ್ಮಾ॥4॥

## ನೀರಿಗ್ಹೊಂಟೆನವ್ವ ನಾನು — ರಾಗ: ಮುಖಾರಿ

ನೀರಿಗ್ಹೊಂಟೆನವ್ವ ನಾನು ನೀರಿಗ್ಹೊಂಟೆನೇ। ಬಾಗಿ ಬಾಗಿ ಸೇದಿ ಸೇದಿ ಸೋತುಹೋದೆನೇ॥ಪ॥ ಅವ್ವ ಕೊಟ್ಟ ತಾಮ್ರದ ಬಿಂದಿಗೆ ನಡುವಲ್ಲಿಟ್ಟೇನೇ। ಮಾವ ಕೊಟ್ಟ ಸೇದೊ ಹಗ್ಗ ಬಲಗೈಲಿಟ್ಟೆನೇ॥1॥ ಭಾವಿ ಕಟ್ಟೆಗೆ ಬಂದು ನಾನು ಬಿಂದಿಗೆ ಬಿಟ್ಟೆ ನಾ। ಸಾವಕಾಶವಾಗಿ ನಾನು ಬಿಂದಿಗೆ ಜಗ್ಗೇನಾ॥2॥ ನೀರು ಸೇದಿ ನಡದಲ್ಲಿಟ್ಟು ಮನೆಗೆ ಬಂದೆ ನಾ। ತುಂಬಿದ ಬಿಂದಿಗೆ ತಂದು ನಾನು ಮನೆಯಲ್ಲಿಟ್ಟೆ ನಾ॥3॥ ಹಿತ್ತಲ್ಲಿದ್ದ ಹಂಡೆ ತಪ್ಲೆ ತುಂಬಿಸಿ ಬಿಟ್ಟೆನೇ। ಸ್ನಾನ ಮಾಡಿ ಮಡಿಯನುಟ್ಟು ದೇವರ ನೆನೆದೇನೇ॥4॥

## ಪಂಚಮಿ ಹಬ್ಬಕ್ಕುಳಿದಾವೆ — ರಾಗ: ಕಲ್ಯಾಣಿ

ಪಂಚಮಿ ಹಬ್ಬಕ್ಕುಳಿದಾವೆ ದಿನ ನಾಕ। ಅಣ್ಣ ಬರಲಿಲ್ಲ ಯಾಕಾ ಕರಿಯಾಕ। ಇನ್ನು ಬರಲಿಲ್ಲ ಯಾಕಾ ಕರಿಯಾಕ॥ಪ॥ ನಮ್ಮ ತೌರೂರು ಗೋಕುಲ ನಗರ। ಮನಿಅಂದಾದ ರಾಜಮಂದೀರ। ನಮ್ಮ ಅಣ್ಣಯ್ಯ ದೊಡ್ಡ ಸಾಹುಕಾರ। ಅಣ್ಣ ಬರಲಿಲ್ಲ ಯಾಕಾ ಕರಿಯಾಕ॥1॥ ನಮ್ಮ ತೌರಲ್ಲಿ ಪಂಚಮಿ ಭಾರಿ। ಮಣ ಅವಲಕ್ಕಿ ತಂಬಿಟ್ಟು ಸೂರಿ। ನಾನ್ ತಿನ್ವಾಕಿ ಮನ ಬಂದ್ಹಾಂಗ। ಅಣ್ಣ ಬರಲಿಲ್ಲ ಯಾಕಾ ಕರಿಯಾಕ॥2॥ ಮುತ್ತಿನಂತಾಕಿ ನನ್ನ ಅತ್ತೀಗಿ। ಬಾಳಾ ಪ್ರೀತಿ ನನ್‌ಮ್ಯಾಗೆ ಆಕೀಗಿ। ಬಿಟ್ಟಳೇನವ್ವ ನನ್ನ ಹೀಂಗಿರಲಾಕಾ। ಬಂದೆ ಬರ್ತಾನ ಅಣ್ಣ ಕರ್ಯಾಕ, ಹೆಂಗಾದೀತ ತಂಗೀನ್ ಮರ್ರ್ಯಾಕ॥3॥ ನನ್ನ ಗೆಳತೀರು ಮಾಡ್ತಾರೆ ಗೇಲಿ ಅವ್ರು ಆಡೋದು ಅಲ್ಲಿ ಜೋಕಾಲಿ। ಹಬ್ಬ ಬಂದ್ರು ಬರಲಿಲ್ಲ ಅಣ್ಣ ಯಾಕ। ಮನಸು ಹರಿತೈತೆ ತವರಿಗ್ಹೋಗಾಕೆ॥4॥

## ಬನ್ನಿರೋ ಗೆಳೆಯರೆಲ್ಲ ಬೇಗ — ರಾಗ: ಶುದ್ಧಧನ್ಯಾಸಿ

ಬನ್ನಿರೋ ಗೆಳೆಯರೆಲ್ಲ ಬೇಗ ಬನ್ನಿರೋ। ರೈತರೆಲ್ಲ ಹೊಲದಿ ನಾವು ದುಡಿವ ಬನ್ನಿರೋ॥ ತದದಿ ತದಾಂ ತದದಿ

ತದಾಂ ತದದಿ ತದಾಂತದಾಂತಾ। ಹೊಯ್ಯಾರೇ, ಹೊಯ್ಯರೆ, ಹೊಯ್ಯರೆ, ಹೊಯ್ಯರೆ ಹೊಯ್ಯರೆ ಹೊಯ್ಯಾರೇ।।ಪ।। ನೆಲವನ್ನು ಉತ್ತಿ ನಾವು ಬೀಜ ಬಿತ್ತುವಾ। ಹಗಲೆಲ್ಲಾ ಹೊಲದಲ್ಲಿ ದುಡಿದು ಉಣ್ಣುವಾ। ದೇಶಸೇವೆಗಾಗಿ ನಾವು ಎದ್ದು ನಿಲ್ಲುವಾ। ಓ ದೇವಾ ನೀ ಕಾಯೋ ದುಡಿವ ರೈತರಾ।।1।। ಹೊಲದಲ್ಲಿ ತೆನೆ ಕೊಯ್ದು ರಾಶಿ ಹಾಕುವ। ರಾಶಿ ರಾಶಿ ಪೈರುಗಳನು ಮನೆಗೆ ಒಯ್ಯುವ। ಕುಟ್ಟಿ ಕುಟ್ಟಿ ಭತ್ತದಿಂದ ಅಕ್ಕಿ ತೆಗೆಯುವ। ಓ ದೇವಾ ನೀಕಾಯೋ ದುಡಿವ ರೈತರಾ।।2।। ಸಾಲು ಸಾಲು ಸಾಗುತಲಿ ಗಿಡವ ನೆಡುವಾ। ಹಾಡಿ ಹಾಡಿ ರಾಗದಲಿ ಕುಣಿದು ನಲಿಯುವಾ। ಬೇಗ ಬೇಗ ದುಡಿದು ನಾವು ಮನೆಯ ಸೇರುವಾ। ಓ ದೇವಾ ನೀಕಾಯೋ ದುಡಿವ ರೈತರ।।3।। ಹೊಲವೆ ನಮ್ಮ ಯುದ್ಧಭೂಮಿ ನಾವು ಯೋಧರು। ಜಡತೆ ಶತ್ರುಗಳನು ತೊಡೆವ ದುಡಿವ ರೈತರು। ನಮ್ಮ ಐಕ್ಯ ಒಲವಿನಿಂದ ಯಾರು ಪಡೆದರು। ಓ ದೇವ ನೀ ಕಾಯೊ ದುಡಿವ ರೈತರ।।4।।

### ಬಂದೆವು2 ಹಾಡುವೆವು ಮಧುರೋಲ್ಲಾಸ — ರಾಗ: ಮೋಹನ

ಬಂದೆವು ಬಂದೆವು ಹಾಡುವೆವು। ಮಧುರೋಲ್ಲಾಸ ನೀಡುವೆವು। ಧಿಮ್ಮಾನೆ ಕುಣಿಯೋಣ ಬನ್ನಿರೆ। ಆಹಾ ಧಿಮ್ಮಾನೆ ನಲಿಯೋಣ ಬನ್ನಿರೆ।।ಪ।। ಎತ್ತೆತ್ತ ನೋಡಿದರು ಹಸಿರು ನೆಲ। ಸುತ್ತಮುತ್ತ ಕೋಗಿಲೆಯ ಕಲಕಲ। ಅತ್ತಇತ್ತ ಎಲ್ಲೆಲ್ಲು ಪುಷ್ಪದ ನೆಲ। ನೀ ಸ್ವಲ್ಪ ಇದರ ಸವಿ ಸವಿಯಲಾ।।1।। ಅಂದದೀ ಬಂದಿರುವ ಚಂದಿರನ। ಚಂದದೀ ನರ್ತಿಸುವ ನವಿಲಿನಾ। ಮನತುಂಬಿ ಕುಣಿಯುವಾ ಜಿಂಕೆಯಾ। ದುಂಬಿ ಕುಡಿಯುವಾ ಹೂ ಗೊಂಚಲಾ।।2।। ಭರ್‍ರಾನೆ ಬೀಸುವ ಸಮಿರದಲಿ। ಝರ್‍ರಾನೆ ಭೋರ್ಗರೆವ ಝುರಿಯಲಿ। ಕೆಂಪಾನೆ ತೇಲುವ ಕಮಲದಲಿ। ಸೊಂಪಾದ ಮಕರಂದ ಹೀರುತಲಿ ।।3।।

### ಭತ್ತ2 ಹೋಯ್ ಭತ್ತ2 — ರಾಗ: ಶಿವರಂಜನಿ

ಭತ್ತ ಭತ್ತ ಹೋಯ್ ಭತ್ತ ಭತ್ತ। ಭತ್ತ ಬಂತು ಭತ್ತ ಬಂತು ಭತ್ತದ ಬೀಡು ನಾವ್ ಉತ್ತಿ ಬಿತ್ತಿ ಬೆಳೆವ ನಮ್ಮ ಮುತ್ತಿನ ನಾಡು।।ಪ।। ಬೀಸುತಿದೆ ಬಯಲಾಗೆ ಹೊಸಗಾಳಿ। ಹೊತ್ತು ತರುತಿದೆ ಹೊಸ ಹೊಸ ರಾಗಾವಳಿ।।1।। ರೆಕ್ಕೆ ಹಕ್ಕಿ ಅಂಬರದೊಳಗೆ ಆಡುತ್ತಾವೆ। ಅಕ್ಕ ಚಿಕ್ಕ ಚುಕ್ಕಿಹಾಂಗೆ ಕಾಣುತಾವೆ।।2।। ಮೂರುಲೋಕಕ್ಕೆಲ್ಲ ದಾರಿ ತೋರುತಾವೆ। ದೇವ ಕೀರುತಿಯ ಹಾದಿಯಲ್ಲಿ ತೇಲುತ್ತಾವೆ।।3।। ಭೂಮಿತಾಯಿ ಮಡಿಲಲ್ಲಿ ಮೆರೆಯೋಣ। ನಮ್ಮ ಭಾಧೆಗೀದೆ ಎಲ್ಲ ಮರೆಯೋಣ।।4।। ಮಳೆಹೊಳೆಯನ್ನು ನಾವು ಕೂಡಿಸೋಣ। ನಮ್ಮ ಬೆಳೆಯನ್ನು ಬಂಗಾರ ಮಾಡೋಣ।।5।। ಮೂರು ಲೋಕಕ್ಕೆಲ್ಲ ಮುಕ್ತಿ ತೋರಿಸ್ತಾನೆ। ದೇವ ಕೀರುತಿಯ ಹಾದಿಯಲ್ಲಿ ಸೇರಿಸ್ತಾನೆ।।6।। ಭತ್ತಾ ಬಂತು ಭತ್ತಾ ಬಂತು ಭತ್ತಾ ಬನ್ನೂರ ಬಯಲಾಗೆ ಬನ್ನೂರ ಬಯಲಾಗೆ ಬೆಳೆದವ್ರೆ ಬಿಳಿಭತ್ತ। ಬಂದು ನೋಡಿರೋ ಭತ್ತಾವ।।7।।

### ಮಲೆ ಮಾತಾಡಿ ಹುಲಿ ಕರಡಿ ಜೂಜಾಡಿ — ರಾಗ: ಖರಹರಪ್ರಿಯ

ಮಲೆ ಮಾತಾಡಿ ಹುಲಿ ಕರಡಿ ಜೂಜಾಡಿ। ಅಲ್ಲೆರೆಡು ಕಾಳಿಂಗ ಮರೆಯಾಯ್ತು ಮಹದೇವ। ತಿಳಿಯಾದು ನಿಮ್ಮ ಘನಮಹಿಮೆ।।1।। ಮಲ್ಲಯ್ನ ಹಟ್ಟೀಲಿ ಮಲ್ಲಿಗೆ ಗಿಡಹುಟ್ಟಿ। ಎಲ್ಲಿದ್ದರೇನಾ ಘಮನಾಗೆ। ಮಾದಯ್ನ। ಗಿರಿಮ್ಯಾಗ್ಲ ಮೊಗ್ಗು ಕೆದರೀತು।।2।। ಕರ್‍ರೆಂಬ ಕತ್ತಲು ಭೋರೆಂಬ ಮಳೆಸಿಂಚು। ಹ್ಯಾಗೆ ಬರಲಯ್ಯ ನಿನಸೇವ್ಗೆ। ಮಹದೇವ। ದೀವಳಿಗೆ ಸೇವೆ ಘನಸೇವೆ।।3।। ಅಣ್ಣ ಮಾದಯ್ನ ಸಣ್ಣ ತೇರಿನ ಮ್ಯಾಲೆ। ಹನ್ನೆರಡು ಹೆಡೆಯಾ ಸರುಪಾದ। ಜಡೆಮ್ಯಾಲೆ। ಅಣ್ಣ ಮಾದಯ್ಯ ಒರಗವ್ನೆ।।4।। ಒಬ್ಬೊಬ್ಬೆ ಗುಂಟೇ ಒಬ್ಬೇ ಸಾಲಿಗುಂಟೆ। ದರ್ಬೆಯ ಹುಲ್ಲ ಕುಯಿಕೊಂಡು। ಮಾದಯ್ನೋರು। ಗದ್ದುಗೆ ಮ್ಯಾಲೆ ಮೆರೆದರು ।।5।। ಹಳ್ಳಕೊಳ್ಳದ ನೀರು ಬೆಳ್ಳಿಯ ಕೈಚೊಂಬು। ಅಲ್ಲಿ ಮಾದಯ್ನ ಶಿವಪೂಜೆ। ಮಾಡ್ವಾಗ। ಬೆಳ್ಳಿಯ ಘಂಟೆ ಢಣರೆಂದು।।6।। ನಂಜನ ಗೂಡಲ್ಲಿ ನಾಲ್ಕೈದು ಬಾಗಿಲು। ನಂದಿಕಂಬೈದು ಪಟಐದು ನಿನ್ನ ಮಂಗಳಾರತಿ ಹದಿನೈದು ।।7।।

**ಮಾತನಾಡಣ್ಣಯ್ಯ ಮಾತನಾಡು** **ರಾಗ: ಪುನ್ನಾಗವರಾಳಿ**

ಮಾತನಾಡಣ್ಣಯ್ಯ ಮಾತನಾಡು। ಏ ಮುದ್ದು ಏ ಗಿಳಿಯೆ ಮಾತನಾಡು। ಏ ರನ್ನ ಏ ಬಣ್ಣ ಮಾತನಾಡು। ಏಗುಣ್ಣ ಏ ಚೆನ್ನ ಮಾತನಾಡು। ಕಂಚಿನ ಕೈತಾಳ ಮಾತನಾಡು। ಅಹ ಮುತ್ತಿನ ಓಲೆಯಂತೆ ಮಾತನಾಡು। ಬಂಗಾರದ ಒಡವೆಯಂತೆ ಮಾತನಾಡು। ಏ ಮುದ್ದು ಏ ಗಿಣಿಯೆ ಮಾತನಾಡು।। ಬೆಂಗ್ಳೂರು ಬಣ್ಣದಂತೆ ಮಾತನಾಡು। ಮೈಸೂರು ಹೆಣ್ಣಂತೆ ಮಾತನಾಡು। ಮಂಗ್ಳೂರು ಚೆಂದವಂತೆ ಮಾತನಾಡು। ಏ ಗುಣ್ಣ ಏ ಚೆನ್ನ ಮಾತನಾಡು।। ಆಗದೋನೆ ಭೋಗದೋನೆ ಮಾತನಾಡು। ನಾಗರ ನಡುಕಟ್ಟಿನೋನೆ ಮಾತನಾಡು। ಕೋಗಿಲ್ಯಾಂಗೆ ಕೂಗ್ತಿಯಲ್ಲೊ ಮಾತನಾಡು। ಏ ಮುದ್ದು ಏ ಗಿಣಿಯೆ ಮಾತನಾಡು। ಮೂಡಲ್ ಸೀಮೆ ಹೆಣ್ಣು ಕಾಣೊ ಮಾತನಾಡು। ಮುತ್ತಿನ ತುರಾಯಿದೋಳು ಮಾತನಾಡು। ಕತ್ತಲ ವಿದವೆ ಕಣ್ಣಿಗೆ ಮಾತನಾಡು। ಏಗುಣ್ಣ ಏಚೆನ್ನ ಮಾತನಾಡು।। ಬಾಕ್ಲಲ್ ಬಜಾರಿ ಮರ ಮಾತನಾಡು। ಹಿತ್ಲಲ್ ಕಿತ್ಲೆ ಮರ ಮಾತನಾಡು। ಕೋಟೇ ದಾಟ್ದ್ರೆ ಬಾಕ್ಲು ನನ್ನತಾವ ಮಾತನಾಡು। ಸುತ್ತು ಮುತ್ತ ಸೂರಿಪಾನ ಮಾತನಾಡು।। ನಟ್ಟನಡುವೆ ಸುಂಗ್ರದ್ ತ್ವಾಟ ಕೋಟೇ ದಾಟಿದ್ರೆ ಬಾಕ್ಲು ನಮ್ಮನೆ ಮಾತನಾಡು।।

**ಮಾಯದಂಥ ಮಳೆ ಬಂತಣ್ಣ** **ರಾಗ: ಪುನ್ನಾಗವರಾಳಿ**

ಮಾಯದಂಥ ಮಳೆ ಬಂತಣ್ಣ ಮದಗಾದ ಕೆರೆಗೇ। ಅಂಗೈಯಷ್ಟು ಮೋಡನಾಗೀ ಭೂಮೀ ತೂಕದ ಗಾಳೀಬೀಸೀ। ಗೂಡಾಗಿ ಗೂಡಾಗಿ ಚೆಲ್ಲಿದಳು। ಗಂಗಮ್ಮ ತಾಯೀ।। ಏರೀಮ್ಯಾಗಳ ಬಲ್ಲಳು ರಾಯ ಕೆರೆಯಾ ಒಳಗಳ ಬೆಸ್ತಾರ್ರುಡುಗಾ। ನೀನೋಡೋಡೀ ಸುದ್ದಿಯ ಕೊಡಿರಯ್ಯೋ ನಾನಿಲ್ಲುವಳಲ್ಲಾ।।1।। ಆರು ಸಾವಿರ ಒಡ್ಡರ ಕರಸೀ ಮೂರು ಸಾವಿರ ಗುದ್ದಲಿ ತರಿಸೀ। ಸೋಲು ಸೋಲಿಗೆ ಮಣ್ಣಾನ್ಹಾಕ್ಸಯ್ಯೋ ನಾನಿಲ್ಲುವಳಲ್ಲ।।2।। ಆರು ಸಾವಿರ ಕುರಿಗಳ ತರಿಸಿ। ಮೂರು ಸಾವಿರ ಕುಡುಗೋಲು ತರಿಸೀ। ಕಲ್ಲು ಕಲ್ಲಿಗೇ ರಕ್ತವ ಬಿಡಿಸಯ್ಯೋ ನಾನಿಲ್ಲುವಳಲ್ಲಾ।।3।। ಒಂದು ಬಂಡೀಲಿ ವೀಳೆದಡಿಕೇ। ಒಂದು ಬಂಡೀಲಿ ಚಿಗುಳೀ ತಮ್ಟ. ಮೂಲು ಮೂಲೆಗೆ ಗಂಗಮ್ನ ಮಾಡ್ಸಯ್ಯೋ ನಾನಿಲ್ಲುವಳಲ್ಲ।।4।। ನೂರುಜನಾ ಮುತ್ತೈದೇರ್ ಕರಸಯ್ಯೋ। ನಾನಿಲ್ಲುವಳಲ್ಲಾ।। ಮೂಲು ಮೂಲೆಗೆ ಗಂಗಮ್ನ ಮಾಡಿಸಯ್ಯೋ ನಾ ನಿಲ್ಲುವಳಲ್ಲಾ।।

**ಮೂಡಲ್ ಕುಣಿಗಲು ಕೆರೆ** **ರಾಗ: ಭೀಮ್‌ಪಲಾಸ್**

ಮೂಡಲ್ ಕುಣಿಗಲು ಕೆರೆ ನೋಡೋರ್ಗೊಂದ್ ಐಭೋಗ ಮೂಡಿ ಬರ್ತಾನೆ ಚಂದಿರಾಮಾ ತಾನಂದನೋ ಮೂಡಿ ಬರ್ತಾನೆ ಚಂದಿರಾಮಾ ।। ಅಂತಂತ್ರಿಸಿ ನೋಡೋರ್ಗೆ ಎಂಥ ಕುಣಿಗಲು ಕೆರೆ। ಸಂತೇ ಹಾದೀಲಿ ಕಲ್ಲುಕಟ್ಟೆ। ತಾನಂದನೋ। 2ಸಾರಿ।। ಬಾಳೀಯ ಹಣ್ಣಿನಂತೆ ಬಾಗಿದ ಕುಣಿಗಲು ಕೆರೆ। ಭಾವ ತಂದಾನೆ ಬಣ್ಣದ್ ಸೀರೆ ತಾನಂದನೋ।। ಭಾವತಂದಾನೆ ಬಣ್ಣದ್ ಸೀರೆ।। ನಿಂಬೇಯ ಹಣ್ಣಿನಂತೆ ತುಂಬಿದ್ ಕುಣಿಗಲ್ ಕೆರೆ ಅಂದಾ ನೋಡಲು ಶಿವ ಬಂದ್ರು । ತಾನಂದನೋ।। ಅಂದಾ ನೋಡಲು ಶಿವ ಬಂದ್ರು।। ಅಂದಾ ನೋಡಲು ಶಿವ ಬಂದ್ರು ಶಿವಮಗ್ಗಿ ಕಬ್ಬಕ್ಕಿ ಬಾಯ ಬಿಡುತಾವೆ ।ತಾನಂದನೋ।। ಕಬ್ಬಕ್ಕಿ ಬಾಯ ಬಿಡುತಾವೆ।। ಕಬ್ಬಕ್ಕಿ ಬಾಯ ಬಿಡುತಾವೆ ಇಬ್ಬೀಡ ಗಬ್ಬದ್ ಹೊಂಬಾಳೆ ನಡುಗ್ಯಾವೆ। ತಾನಂದನೋ। ಗಬದ್ ಹೊಂಬಾಳೆ ನಡುಗ್ಯಾವೆ।। ಹಾಕ್ಕೋಕ್ಕೊಂದ್ಹಾರುಗೋಲು। ನೂಕ್ಕೋಕ್ಕೊಂದು ಊರುಗೋಲು। ಬೊಬ್ಬೆ ಹೊಡೆದಾವೆ ಬಾಳೆ ಮೀನು। ತಾನಂದನೋ। ಬೊಬ್ಬೇ ಹೊಡೆದಾವು ಬಾಳೆ ಮೀನ್ ಕೆರೆಯಾಗೆ ಗುಬ್ಬಿ ಸಾರಂಗ ನಗುತಾವೆ। ತಾನಂದನೋ। ಗುಬ್ಬಿ ಸಾರಂಗ ನಗುತಾವೆ।।

**ಮುಂಜಾನೆಯಾಯಿತು ಏಳಿರಪ್ಪ** **ರಾಗ: ಖರಹರಪ್ರಿಯ**

ಮುಂಜಾನೆಯಾಯಿತು ಏಳಿರಪ್ಪ ಏಳಿ। ಕೋಳಿಯು ಕೂಗುತಿದೆ ಕೇಳಿರಪ್ಪ ಕೇಳಿ।।ಪ।। ಹಕ್ಕಿಗಳ ಕಲರವವು ಕಿವಿಗಳಲಿ ಮೂಡುತಿದೆ। ಬೇಸಾಯದ ನೇಗಿಲದು ಸಿದ್ಧವಾಗಿ ನಿಂತಿದೆ। ಅನ್ನದಾತ ಬಸವಣ್ಣ ಕೂಗಿ ನಿಮ್ಮ ಕರೆಯುತಿದೆ। ಆತನನ್ನು

ಕೂಡಿಕೊಂಡು ಹೊಲದತ್ತ ಸಾಗಿ।।1।। ಗೇರುಗೇರುಗಳನು ಅಗೆದು ನೆಲವನ್ನು ಹದಮಾಡಿ। ಭೂಮಿತಾಯಿ ಮಡಿಲಿಗೆ ಬೀಜವನ್ನು ಬಿತ್ತುವಾ। ಮಳೆರಾಯನು ಕರುಣೆಯಿಂದ ಕಣ್ಣುತೆರೆದು ನೋಡಲು। ಪೈರುಪಚ್ಚೆ ಎಲ್ಲ ಎದ್ದು ತಲೆದೂಗಿ ಬಾಗಲು।।2।। ಮುತ್ತಿನಂಥ ಜೋಳವಿದು ರನ್ನದಂಥ ರಾಗಿಯಿದು। ಕೊಯ್ದು ಬಡಿದು, ತೂರಿ, ರಾಶಿಹಾಕಿರಿ। ಪ್ರಕೃತಿ ಮಾತೆ ಕೊಟ್ಟ ವರಕೆ ತಲೆಬಾಗಿರಿ ಬಡತನ ನೀಗಿಸಿದಾಕೆಯ ಪೂಜಿಸಿರಿ।।3।।

### ಮೈಸೂರ ನಾಡಿನ ಹುಡುಗಿ — ರಾಗ: ಮೋಹನ

ಮೈಸೂರ ನಾಡಿನ ಹುಡುಗಿ(2ಸಾರಿ) ನಲಿಯುತ ಬರ್ತ್ತಾಳಮ್ಮಾ(2 ಸಾರಿ) ಏನು ಚಂದ ಕಾಣಿಸ್ತಾಳೆ ಚಂದಚಂದ(2ಸಾರಿ)।। ಬೆಂಗ್ಳೂರ ಸೀರೆಯನುಟ್ಟು (2ಸಾರಿ) ಜರತಾರಿ ಕುಪ್ಪಸತೊಟ್ಟು। (2ಸಾರಿ)। ಹಾದಿಯಲ್ಲಿ ಮಾಡ್ತಾಳಮ್ಮ ಡೌಲಾಡೌಲಾ (2ಸಾರಿ) ।।1।। ಕಾಲಲ್ಲಿ ಪೈಜಾಮ್ಹಾಕಿ।2ಸಾರಿ। ಕೊರಳಲ್ಲಿ ಚೈನ್ಹಾಕಿ (2ಸಾರಿ) ಮೂಗಿನ ಮೇಲೆ ಇಟ್ಟಾಳಮ್ಮ ಬಿಳಿಹಳ್ಳು (2ಸಾರಿ) ।।2।। ಮಾಟಾಗಿ ತಲೆಯ ಬಾಚಿ।(2ಸಾರಿ) ಬಳ್ಳಾರಿ ತುರಬ ಕಟ್ಟಿ।2ಸಾರಿ। ಮೊಗ್ಗಿನ ಮಾಲೆ ಹಾಕ್ಯಾಳಮ್ಮ ನಾನಾತರ(2ಸಾರಿ) ।।3।। ಮೋಟಾದ ಗಿಡ್ಡ ಹುಡುಗಿ।2ಸಾರಿ। ಪೀಟೀಲನಿಟ್ಟುಕೊಂಡು (2ಸಾರಿ) ಸರಿಗಮ ಬಾರಿಸ್ತಾಳೆ ಸರಾಸರಾ (2ಸಾರಿ)।।4।।

### ಸೊಗಸಿನ ಜೀವನ ನಮ್ಮದು — ರಾಗ: ಮೋಹನ

ಸೊಗಸಿನ ಜೀವನ ನಮ್ಮದು ರೈತ ಜೀವನ। ಭೂಮಿತಾಯಿ ಮಕ್ಕಳೆಂಬ ನುಡಿಯೆ ಪಾವನ.... ಹೊಯ್ ಹೊಯ್ ಹೊಯ್ ಹೊಯ್..... ಹೊಯ್।।ಪ।। ದುಡಿಯೋಣ ಕೂಡಿ ಬೆಳೆಸುವ ಪೈರ। ದುಡಿಯೋಣ ನಾವು ಬೆಳೆಸುವ ಪೈರ। ಭೂಮಿತಾಯಿ ಒಡನೆ ನಾವು ಆಟವಾಡಲು ನಾವು।।2ಸಾರಿ।। ಆಡಲು ನಾವು। ಎತ್ತು ನೊಗ ನೇಗಿಲನ್ನು ಹಿಡಿದು ಹೊರಡುವ। ಹೊತ್ತು ಏರುವ ಮೊದಲೆ ನಾವು ಹೊಲಕ್ಕೆ ಇಳಿಯುವಾ।।1।। ಬಿತ್ತೋಣ ಕಾಳ ಉತ್ತನೆಲದಿ। ಬೆಳಸುವ ಪೈರ ಶುದ್ಧ ಜಲದಿ। ಪೈರ ಬೆಳೆವ ಬಣ್ಣ ಹಸಿರು ಪಚ್ಚೆ ತೆರದಿ।।2ಸಾರಿ।। ಪಚ್ಚೆ ತೆರದಿ। ಬನ್ನಿ ಬಣ್ಣದ ಹೊಲವ ನೋಡಿ ಪಡುವ ಆನಂದ। ಕಾಳಿಗಾಗಿ ಬರುವ ಪಕ್ಷಿಯ ಹಾಡೆ ಚೆಂದ।।2।। ನಾಗಿ, ಸೋಮಿ, ತಿಮ್ಮಿ, ಎಲ್ಲರು ಬನ್ನಿರೆ। ಕೆಂಚ ರನ್ನ ಬೋರ ನೀವು ಬನ್ನಿರೋ। ಬಡಿದ ಪೈರ ನಾವು ಸೂಡಿ ಕಟ್ಟಿ ಇಡುವಾ। ಕಾಳ ಗಾಳಿಗೆ ತೂರುವ ....।।2ಸಾರಿ।। ಗಾಳಿಗೆ ತೂರುವ। ಬಡಿದ ಕಾಳ ಮೂಟೆಕಟ್ಟಿ ಅಟ್ಟಿಗೆ ಹೊರುವ...। ಅನ್ನದಾತೆ ಜಗದಮಾತೆ ಅವಳ ನೆನಯುವಾ।।3।।

### ಹಾಲಮ್ಮ ಹಾಲು (ಸಂಭಾಷಣಾ ಗೀತೆ) — ರಾಗ: ಖರಹರಪ್ರಿಯ

ಹಾಲಮ್ಮ ಹಾಲು ಹಾಲು ಬೇಕೆ ಮೊಸರು ಬೇಕೆ ಹಾಲಮ್ಮ ಹಾಲು।। ನೀ ಯಾವೂರಿನವಳೆ ಗೊಲ್ಲಭಾಮೆ? ನೀ ಎಲ್ಲಿಗೆ ಹೋಗ್ತೀಯೆ ಗೊಲ್ಲಭಾಮೆ? ನನ್ನೂರು ಮಾಲೂರು ಚೆನ್ನಿಗರಾಯ ನಾನು ಸಂತೇಗೆ ಹೋಗ್ತೇನೆ ಚೆನ್ನಿಗರಾಯ।।1।। ನೀನು ಒಂಟಿಯಾಗಿ ಹೋಗಲಾರೆ ಗೊಲ್ಲಭಾಮೆ ನಾನು ನಿನ್ ಹಿಂದೆ ಬರ್ತೀನೆ ಗೊಲ್ಲ ಭಾಮೆ। ನಾನು ಒಂಟಿಯಾಗಿ ಹೋಗಬಲ್ಲೆ ಚೆನ್ನಿಗರಾಯ ನೀನ್ ನನ್ ಹಿಂದೆ ಬರ್ಬೇಡ ಚೆನ್ನಿಗಾರಯ।।2।। ನೀನೆಷ್ಟು ಚೆಲುವೆಯೆ ಗೊಲ್ಲಭಾಮೆ ನೀನೆಷ್ಟು ವೈಯ್ಯಾರಿಯೆ ಗೊಲ್ಲಭಾಮೆ? ನನ್ ಸುದ್ದಿ ನಿಂಗ್ಯಾಕೋ? ತುಂಟಗಾರ ನನ್ ಸುದ್ದಿ ನಿಂಗ್ಯಾಕೋ? ಮಾಟಗಾರ।।3।।

## ಕೋಲಾಟ

### ಈ ಊರ ಹುಡುಗ್ಯಾರು — ರಾಗ: ಮೋಹನ

ಈ ಊರ ಹುಡುಗ್ಯಾರು ನೀರಿಗೆ ಹೊರಟವ್ರೆ ಕೋಲು ಕೋಲನ್ನ ಕೋಲೆ। ಸೋನೆ ಮಳೆಯಾಗೆ ನಿಂತಿದ್ದನ್ಹುಡುಗ।।2 ಸಾರಿ।। ಆ ಹೊತ್ತಿಗೆ ಕೋಲು ಕೋಲನ್ನ ಕೋಲೆ।। ಹಳ್ಳದ ನೀರಾಗಿ ಹರಿದಿದ್ದಳ್ಹುಡುಗಿ।।2ಸಾರಿ।। ಆ ಹೊತ್ತಿಗೆ ಕೋಲು ಕೋಲನ್ನ ಕೋಲೆ।। ಅಡ್ಡೌಲಿಯಾಗಿ ಅಡ್ಡಾಡ್ತನ್ಹುಡುಗ।।2ಸಾರಿ।। ಆ ಹೊತ್ತಿಗೆ ಕೋಲು ಕೋಲನ್ನ ಕೋಲೆ।। ಬಾಳೆ

ಮೀನಾಗಿ ಬೆಳೆದಿದ್ದ ಹುಡುಗಿ।।2ಸಾರಿ।। ಆ ಹೊತ್ತಿಗೆ ಕೋಲು ಕೋಲನ್ನ ಕೋಲೆ।। ಕೊಕ್ಕರೆಯಾಗಿ ಕುಕ್ಕಿದ್ದನ್ನುಡುಗ।।2ಸಾರಿ।। ಆ ಹೊತ್ತಿಗೆ ಕೋಲು ಕೋಲನ್ನ ಕೋಲೆ।। ಹೆಬ್ಬುಲಿಯಾಗಿ ಅಬ್ರಸ್ತಾಳ್ಹುಡುಗಿ। ಛಲಗಾರನಾಗಿ ಬಂದಿದ್ದನ್ನುಡುಗ ಕೋಲು ಕೋಲನ್ನ ಕೋಲೆ।।

### ಏಳು ಚಿನ್ನದ ಗಣಿ — ರಾಗ: ಶುದ್ಧಧನ್ಯಾಸಿ

ಏಳು ಚಿನ್ನದ ಗಣಿ ಏಳು ರನ್ನದ ಗಿಣಿ। ಏಳಯ್ಯ ಸ್ವಾಮಿ ಬೆಳಗಾದೋ।। ಏಳಯ್ಯ ಸ್ವಾಮಿ ಬೆಳಗಾದೋ।। ಮೂಡಲಿಂದ। ಸ್ವಾಮಿ ರಥವೇರಿ ಬರುತಾನೆ। ತಂದನಾನಿ ತಾನೋ ತಂದನಾನೋ ತಾ।। ನಂದನೋಯಿ ತಾನೊ ತಂದನಾನೊ।।1।। ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಲಿ। ಎಳ್ಳುಜೀರಿಗೆ ಬೆಳೆಯೋಳ।। ಎಳ್ಳು ಜೀರಿಗೆ ಬೆಳೆಯೋಳ ಭೂಮಿತಾಯ। ಎದ್ದೊಂದು ಘಳಿಗೆ ನೆನೆದೇವೋ।।ತಂದನಾನಿ।। ಬೆಳಗಾಗಿ ನೆನೆದವು ಮದನ ಗೋವಿಂದನ। ಹದಿನೆಂಟು ನಾಮದ ಒಡೆಯೋನ। ಹದಿನೆಂಟುನಾಮದ ಒಡೆಯೋನ ನೆನೆದರೆ ಹೊತ್ತಿದ್ದ ಪಾಪ ಪರಿಹಾರ।।ತಂದನಾನಿ।।

### ಕೋಲು ಸುವ್ವೆನಾರಿ ಕೋಲೇ

ಕೋಲು ಸುವ್ವೆನಾರಿ ಕೋಲೇ ಕೋಲು ಪದವ ಕೇಳು ಬಾಲೆ। ಏಳುವರೆಲ್ಲರು ಮ್ಯಾಲೇ। ನಮ್ಮ ಸ್ವಾಮಿ ಮಾದಪ್ಪನ ಲೀಲೆ।।ಪ।। ಏರಿ ಮೇಲೆ ಮೋಯೋದು ಎತ್ತು। ಕಾಲ್ ಮುರ್‍ಕೊಂಡು ಕೊರ್‍ಕ್ಲಿಗೆ ಬಿತ್ತು। ಅಯ್ಯಾ ಹೆಗಲಲ್ಲಿ ನೊಗಾನ ಹೊತ್ತು। ನಮ್ಮ ರಾಮಪ್ಪನ ಕಿವಿಗೆರಡು ಮುತ್ತು।। ಹಾದೀಲಿ ಹೋಗೋನೆ ಹುಡುಗ। ಅವ ತೊಪ್ಪೇನ ಎತ್ತುವ ಬೆಡಗ। ಅಯ್ಯಾ ಹಕ್ಕಿನ ಹಿಡ್ಕೊಂಡು ಗಿಡುಗ। ನಮ್ಮ ರಾಮಪ್ಪನ ಕೈಗೆರಡು ಪಚ್ಚೆ ಕಡಗ।। ಸುಕ್ರಾರ ಮೈಸೂರುಸಂತೆ। ಅಲ್ಲಿ ಮಾರೋದು ಮೂಲಂಗಿ ಕಂತೆ। ಅಯ್ಯೋ ನಂಗೂ ನಿಂಗು ಯಾವವೇ ಚಿಂತೆ। ತೂರಿ ಎಸೆಯೋದು ಹಣ್ಣು ಜವನವಂತೆ।। ಹೊಸ್ಮನೆಗೆ ಹೋಗ ಬ್ಯಾಡಮಲ್ಲಿ। ಅಲ್ಲಿ ಗ್ವಾಡೆ ಮ್ಯಾಲೆ ಕುಂತೈತೆ ಪಲ್ಲಿ। ಅಯ್ಯೋ ಪಲ್ಲಿ ಬಿದ್ದರೆ ಶಕುನವಲ್ಲಿ। ನಮ್ಮ ರಾಮಪ್ಪನ ಕೈಗೆರಡು ಬಿಲ್ಲಿ।। ಬಂದದ್ದು ಬರಲಯ್ಯ ಇಂದೆಯೇ ನಮ್ಮ ರಾಮಾನ ದಯವಿಹುದು ಹಿಂದೆಯೇ। ದಯವಿದ್ದರೆ ಗೆಲ್ಲುವೆವು ಮುಂದಕೆ ನಮ್ಮ ರಾಮಾನ ಪಾದಾರವಿಂದಕೆ।।

### ಕೋಲು ಸಖಿ ಚಂದ್ರಮುಖಿ — ರಾಗ: ಮಾಂಡ್

ಕೋಲು ಸಖಿ ಚಂದ್ರಮುಖಿ ಕೋಲೆನಾದ ಲೀಲೆ। ಕೋಲೆ ನಾದ ಲೀಲೆ।।ಪ।। ಮುಂಜಾವದ ಎಲರ ಮೂಸಿ ನೋಡುತಿಹವೆ ನಲ್ಲೆ। ತರಳ ಎರಳೆ ಚಿಗುರು ಚಿಗುರೆ ಹೂವು ಹೂವು ಹುಲ್ಲೆ ಕಂಗೊಳಿಸುವ ಕೆಂಪು ಮುಂದೆ ಕಂಗೆಡಿಸುವ ಮಂಜು ಹಿಂದೆ। ಅತ್ತಣಿಂದ ಬೇಟೆಗಾರ ಬರುವ ನಾನು ಬಲ್ಲೆ।।ಮುಂಜಾವದ ಎಲರ ಮೂಸಿ ನೋಡುತಿಹವೆ ನಲ್ಲೆ।।2ಸಾರಿ।। 1।। ಬೀಸುತಿರುವ ಪ್ರಾಣವಾಯು ಹೀರುತಿಹವೆ ನೀರೆ। ಕರೆವ ಕರುವು ಕುಣಿವ ಮಣಕ ತೊರೆವ ಗೋಗಂಭೀರೇ।। ಕಂಗೊಳಿಸುವ ಕೆಂಪು ಮುಂದೆ ಕಂಗೆಡಿಸುವ ಮಂಜು ಹಿಂದೆ। ಕಾಣೆ ಕೊಳಲಿನವನ ಎನುವೆ ಎಲ್ಲು ಇಹನು ಬಾರೆ। ಬೀಸುತಿರುವ ಪ್ರಾಣವಾಯು ಹೀರುತಿಹವೆ ನೀರೆ।।2।। ಬೆಳ್ಳಿ ಚುಕ್ಕೆ ಚಿಕ್ಕೆಯಾಗಿ ಮುಳುಗಿತಲ್ಲೆ ಬಾಲೆ। ಮುಕುಲ ಅಲರು ಮಲರು ಪಸರ ಕಂಡು ಕಣ್ಣು ಸೋಲೆ।। ಕಂಗೊಳಿಸುವ ಕೆಂಪು ಮುಂದೆ ಕಂಗೆಡಿಸುವ ಮಂಜು ಹಿಂದೆ। ಕಾದಲನೆಡೆ ಬೇಡ ಬಹುಳ ಕಾದಲ ಹೂಮಾಲೆ। ಬೆಳ್ಳಿ ಚುಕ್ಕೆ ಚಿಕ್ಕೆಯಾಗಿ ಮುಳುಗಿತಲ್ಲೆ ಬಾಲೆ।।3।। ಬೇಟೆ ಎಲ್ಲ ಆಟವೆಲ್ಲ ಬೇಟದ ಬಗೆ ನಾರಿ। ಮುಗಿಲ ಬಾಯ ಗಾಳಿ ಕೊಳಲ ಬೆಳಕ ಹಾಡಬೀರಿ। ಕಂಗೊಳಿಸುವ ಕೆಂಪು ಇರಲಿ। ಕಂಗೆಡಿಸುವ ಮಂಜುಬರಲಿ। ಕಳೆಯಲಿಲ್ಲ ಕತ್ತಲಂಥ ಕತ್ತಲವೆ ಜಾರಿ। ಬೇಟೆ ಎಲ್ಲ ಆಟವೆಲ್ಲ ಬೇಟದ ಬಗೆ ನಾರಿ।।4।।

### ಕೋಲು ಕೋಲಣ್ಣ ಕೋಲೇ

ಕೋಲು ಕೋಲಣ್ಣ ಕೋಲೇ ಚಿನ್ನದಾ ರನ್ನದಾ ಬಣ್ಣದಾ ಬಿದಿರಿನ।।ಪ।। ಕೋಲು ಆಟವು ಚಿಂದ ಕಾಳೇಯ ದನಿಚಿಂದ।

ಎಳೆನಗೆ ಹುಡುಗಿ ಬಲುಚೆಂದ। ಹಾಲು ಬೋನವು ಚೆಂದ ಮೇಲೆ ಹೋಳಿಗೆ ಚೆಂದ। ಮಾಳಿಗೆ ಮನೆಯು ಬಲುಚೆಂದ॥1॥ ಮನೆಗೆ ಮಕ್ಕಳುಚೆಂದ ಬನಕೆ ಮರವು ಚೆಂದ। ಮನೆಗೊಬ್ಬ ಅಜ್ಜಿ ಇರೆಚಂದ। ತಾಳಿಕೊರ್ಳಿಗೆ ಚೆಂದ ಕಳೆಯುಳ್ಳ ಮುಖಚೆಂದ। ಜೋಳದ ಮುದ್ದೆ ಬಲುಚೆಂದ॥2॥ ಹಲಸಿನ ತೊಳೆಚೆಂದ ಗಳಿಸಿದ ಮುಖಚೆಂದ। ಬಾಳೆಯ ಗೊನೆಯು ಬಲುಚೆಂದ। ಕತ್ತೆಯ ಮರಿಚೆಂದ ಕುತ್ತಿಗೆಗೆ ಸರಚೆಂದ। ಮುತ್ತುಗದ ಹೂವೇ ಬಲುಚೆಂದ॥3॥ ವಿದ್ಯೆಗೆ ಬುದ್ಧಿ ಚೆಂದ ಬುದ್ಧಿಗೆ ವಿದ್ಯೆಚೆಂದ। ವಿದ್ಯೆ ಬುದ್ಧಿಗಳಿರುವ ಮಗಚೆಂದ। ದಿನಪ ಗಗನಕೆ ಚೆಂದ ಹುಣ್ಣಿಮೆಯ ಶಶಿಚೆಂದ। ಘನಮಹಿಮಾ ತಾ ಶಿವ ಚೆಂದ॥4॥

### ಕೋಲೆ ಮಾತಾಡುತಾವೆ

ಕೋಲೆ ಮಾತಾಡುತಾವೆ ಬೆಳ್ಳಿಯ ಗೆಜ್ಜೆ ಮಾತಾಡುತಾವೆ। ಮುಂಗೋಳಿ ಕೂಗ್ಯಾವು ಮೂಡು ಕೆಂಪೇರ್ಯಾವು। ಸೂರ್ಯನಾರಾಯಣ ಸ್ವಾಮಿ ರಥವೇರಿ ಬರುವಾಗ। ನಾವೆದ್ದು ಕೈಯ ಮುಗಿದೇವು॥ಪ॥ ನಾಲ್ಕು ಮೂಲೆಗೆ ನಾಲ್ಕು ಚಿನ್ನದ ಕಂಬ। ಬೆಳ್ಳೀಯ ಘಂಟೆ ಸರಪಣಿ ಲೋಹವು। ತಲ್ಲಣಿಸೆ ತೇರು ಹರಿಯಾಲಿ॥1॥ ಉದ್ದಾವಾದವು ತೇರು ಉರಿಯುವಾದವು ಹೊರಜಿ। ಉದ್ದಂಡಕಾರ ಜಗದೊಡೆಯ ನಿನತೇರು। ಮಧ್ಯಾಹ್ನ ಮೊದಲ ಹರಿದಾವೊ॥2॥ ಎಲ್ಲ ದೇವರ ತೇರು ಮೆಲ್ಲಕೆ ಹರಿದವು। ಅಲ್ಲಾಟಗಾರ ನರಸಿಂಹ ನೀನ ತೇರು। ಬೆಲ್ಲದಂಗಡಿ ಮುಂದೆ ಹರಿದಾವೂ॥3॥ ತೇರು ಹರಿದಾವು ತಾನಕ್ಕೆ ನಿಂತಾವು। ತಾರೋ ಚೆನ್ನಯ್ಯ ಜವನಾವ ಬಾಳೆಹಣ್ಣು। ಬೇಡಿಕೊಳ್ಳೆ ಮಗಳೆ ಸೆರಗೊಡ್ಡಿ॥4॥ ಆಯಾವಾದವು ಬಂಡಿ ಛಾಯಾವಾದವು ಕುರುಜು। ತೇರು ರಂಗಯ್ನ ತೇರು ತೇರು ಗೊಂಬೆತೇರು। ರಾಣೆರಂಗಡಿಗೆ ಹರಿಯಾಲಿ॥5॥ ತಂದೆನೊಯಿ ತಾನೊ ತಂದನಾನೋ ತಾ ನಂದನೊಯಿ ತಾನೋ ತಂದನಾನೋ॥

### ಚೆಲುವಯ್ಯ ಚಲುವೋ ತಂದಾನಿ

ಚೆಲುವಯ್ಯ ಚಲುವೋ ತಂದಾನಿ ತಾನೊಚಿನ್ಮಾಯಾರೂಪೆ ಕೋಲನ್ನ ಕೋಲೇ॥ಪ॥ ಇಪ್ಪತ್ತೂರ ಜಕ್ಕು ಒಪ್ಪು ಕಾಣೊ ಮೇಲುಕೋಟೆ। ಹಿಪ್ಪೇಯ ತೋಪು ಸರಿಸಾಲು॥2ಸಾರಿ॥ ನಲ್ಲಿ ನಮ್ಮ ಅಪ್ಪಾ ಚೆಲ್ವಯ್ನ ತೇರು ಹರಿದಾವೋ॥1॥ ತೆಂಗೀನ್ ಹಗ್ಗವ ತನ್ನಿ ತೆಂಗೀನ ಕಾಯಿ ತನ್ನಿ। ಹೊಂಬಾಳೆ ತನ್ನಿ ಸ್ವಾಮಿ ಕಳಸಕ್ಕೆ॥2ಸಾರಿ॥ ಮೇಲುಕೋಟೆ ಮುದ್ದು ಚೆಲ್ವಯ್ನ ತೇರು ಹರಿಯಾಲಿ॥2॥ ಆಯ್ಯಾಣೋ ಆಯ ಆಯ್ಯಾಣೋ ಈ ತೇರು॥ ಆಯಕ್ಕೆ ಬೆಳೆದ ಎಳೆಮಾವು॥2ಸಾರಿ॥ ವಿನ್ ತೇರಿನಲ್ಲಿ। ಅಪ್ಪ ಚೆಲ್ವಯ್ಯ ಮೆರೆದಾನೊ॥3॥ ತೇರು ತೇರು ನೋಡು ತೇರಿನ್ ಭಾವವ ನೋಡು। ತೇರಿಗೆ ಬಣ್ಣ ಬಳಿದಾರೊ॥2ಸಾರಿ॥ ಚೆಲ್ವಯ್ಯನ ಮುತ್ತೀನ ತೇರು ಹರಿಸ್ಯಾರೋ॥4॥ ಬಾಳೇ ಕಾಯಿಗಾಗಿ ಬಾಗೂರಿಗ್ಹೋದೆವೊ। ನಿಂಬೇ ಹಣ್ಣಿಗಾಗಿ ಜಂಬೂರಿಗೆ॥2ಸಾರಿ॥ ಗ್ಹೋಗಿವ್ನಿ। ಗೊಂಬೇಯ ತೇರು ಹರಿಸ್ಯಾರೊ॥5॥ ಕೋಟಿ ಕೋಟೆಯ ಕಂಡೆ ಕೊರಳ ಲಿಂಗವ ಕಂಡೆ। ರುದ್ರನ ಕಂಡೆ ಸ್ವಾಮಿ ಬನದಲ್ಲಿ॥2ಸಾರಿ॥ ಮೇಲ್ಕೋಟೆ ತೋಪ್ನಲ್ಲಿ ಕಂಡೆ ಸ್ವಾಮಿ ಶರಣಾರ॥6॥

### ಸುರಗಿ ಸುರ ಸಂಪಿಗೆ ರಾಗ: ಮಧ್ಯಮಾವತಿ

ಸುರಗಿ ಸುರ ಸಂಪಿಗೆ ಕೋಲು ಕೋಲಣ್ಣ ಕೋಲೇ। ಚಂದದಿಂದ ದಿಮ್ಮಿ ರಾಮ ಕೋಲನಾಡಿದ। ದೇವಕೋಲನಾಡಿದ ರಾಮ ಕೋಲನಾಡಿದ॥ಪ॥ ಅರಸನೂರ್ ಮನೆಯ ಮುಂದೆ ಸಿರಿಯಲ್ ದೇವರ ಗುಡಿಯ ಕಟ್ಟಿ। ವರವ ಪಾಲಿಸೇ ಊರು ಚೆಂಗಿ ಯಲ್ಲಮ್ಮ ಜೈ। ನಿನ್ನ ಮರೆಯಲಾರೆನೆ ತಾಯಿ ಚೆಂಗಿಯಲ್ಲಮ್ಮ॥1॥ ಕಂಡು ಕಡುಗತ್ತಿ ಕೈಯಾಗ್ ಹಿಡಿದು ನಟ್ಟಕತ್ತಿ ಬಗಲಾಗಿಟ್ಟು। ಎಡ್ಕೇ ಬಲ್ಕೇ ಕಟ್ಟಾರಣ್ಣಾ ಎಳ್ಡೆಳ್ಡಾಯ್ದುವಾ-ಜೈ। ಎಡ್ಕೆ ಬಲ್ಕೆ ಕಟ್ಟಾರಣ್ಣಾ ಎಳ್ಡೆಳ್ಡಾಯ್ದುವಾ ॥2॥ ಚಿತ್ರಕಲ್ಲು ದುರ್ಗದಲ್ಲಿ ಪಂಚಕಹಳೆ ನಾದಕೇಳಿ। ಪಂಚಗುಂಡಿಗೆ ಪರಮದಾರಿ ದಂಡ ಕೂಡಿದ ಧೀರ ದಂಡಕೂಡಿದ॥3॥ ದುರ್ಗದುರ್ಗವನ್ನೇರಿ ದುರ್ಗದೊಳಗೆ ಪರಮ ನಾಯ್ಕ ದುರ್ಗದ್ ಮೇಲೆ ಹತ್ತಿ ಶೌರ್ಯದ್ ಕೋಟೆ ನೋಡೆಂದ ಕೋಟೆ ನೋಡೆಂದ॥4॥ ಸೀರೆ ಬುಗುಡಿ ಬಾಗಲ್ಗ್ ತಂದ ಸೀಗೆ ಬೇಲಿ ಎಗರಿದ ಭೂಪ। ಸಾಗರು

ಬಾಗರು ಮಂದಿಕರ್ನಿ ಸಾಲಿಗೆ ನಿಲ್ಲೆಂದ। ಧೀರ ಸಾಲಿಗೆ ನಿಲ್ಲೆಂದ॥5॥ ನೀಲಿ ಕುದುರೆ ಏರಿದ್ ಭೂಪ ನಿಂತು ಎದುರ್ ಆಡಿದ್ರೆ ಕೋಪ॥ ಕೋಟೆಯೊಳ್ಗೆ ನುಲ್ದು ಸಾಮ್ ಮಾಡಿ ನೋಡೆಂದ ಸಾಮ್ ಮಾಡಿ ನೋಡೆಂದ॥6॥

## ಲಾವಣಿ

### ಕೇಳಿರಿ2 ಕನ್ನಡ ಜನಗಳೆ

ಕೇಳಿರಿ ಕೇಳಿರಿ ಕನ್ನಡ ಜನಗಳೆ ಮೈಸೂರಿನ ಹುಲಿ ಟಿಪ್ಪು ಕಥೆ। ಹೈದರಾಲಿಯ ಹೆಮ್ಮೆಯ ಮಗನ ಕನ್ನಡ ನಾಡಿನ ಕೀರ್ತಿಕಥೆ॥1॥ ಸೇನೆಯ ಕಟ್ಟಿದ ನಾಡನು ಬೆಳೆಸಿದ ಭಾವೈಕ್ಯತೆಯನು ಜನರೊಳು ಬಿತ್ತಿದ। ಪೂರ್ಣಯ್ಯರಂಥ ಮಿತ್ರರ ಜೊತೆಯಲಿ ನಿಷ್ಠರ ಬಲವನು ಕೂಡಿಸಿದ॥2॥ ಪೇಶ್ವೆ ಮರಾಠ ನಿಜಾಮ ಕುತಂತ್ರಕ್ಕೆ ಖಡ್ಗವ ಝಳಪಿಸಿ ನಡುಗಿಸಿದ। ದೇಶವ ಕಬಳಿಸಬಂದ ಬ್ರಿಟೀಷರಿಗೆ ಖಡ್ಗದೊಳುತ್ತರ ನೀಡಿದ॥3॥ ಖಡ್ಗವ ಹಿಡಿದ ಟಿಪ್ಪುವ ನೋಡಿದ ಬ್ರಿಟೀಷರೆ ಗಡಗಡ ನಡುಗಿದರು। ವಿಶ್ವದ ವೀರರ ಸಾಲಿಗೆ ಸೇರಿದ ಮೈಸೂರಹುಲಿ ಎಂದು ಹೆಸರಾದ॥4॥ ನಾಡಿಗಾಗಿ ಒತ್ತೆಯನಿಟ್ಟನು ತನ್ನಯ ಮಕ್ಕಳ ಈ ಧೀರ। ಕನ್ನಡನೆಲದಲಿ ಇನ್ನೂ ಹುಟ್ಟಲಿ ಟಿಪ್ಪುವಿನಂಥ ಮಹವೀರ॥5॥ ದುಷ್ಟರ ಮೋಸದ ತಂತ್ರವನರಿಯದೆ ಕೊನೆ ಉಸಿರೆಳೆದ ಸಮರದಲಿ। ಕನ್ನಡಮಣ್ಣಿನ ಕಣಕಣಸಾರಲಿ ಕನ್ನಡ ವೀರನ ಕಥೆಯಲ್ಲಿ॥6॥

### ಭಾರತಮಾತೆಯು ಸ್ವಾತಂತ್ರ್ಯ ಪಡೆದು

ಭಾರತ ಮಾತೆಯು ಸ್ವಾತಂತ್ರ್ಯಪಡೆದು ಅರ್ಧಶತಮಾನವಾಯಿತು। ನೆನೆಯೋಣ ನಾವು ಇಂದು ಗಾಂಧೀ ಜವಾಹರ ಪಟೇಲ್ ಸುಭಾಷರ ತ್ಯಾಗವನು॥ಪ॥ ಪ್ರಗತಿ ಪಥದಲ್ಲಿ ನಡೆದಿದೆ ದೇಶ ಎಲ್ಲರಿಗೂ ಸಮಬಾಳು। ಪ್ರಜಾತಂತ್ರವನು ಮೆರೆಸಿದ ನಾಡು ಅದುವೆ ಆದರ್ಶವಾಗಿದೆ ಕೇಳು॥ ಚಳಿಬಿಸಿಲಿಗೆ ಮೈಯೊಡ್ಡಿ ನಿಂತಿರುವ ಗಡಿನಾಡ ಯೋಧರ ನೋಡು। ಬೆವರಹನಿ ಸುರಿಸಿ ಬೆಳೆಯನು ತೆಗೆಯುವ ರೈತನ ದುಡಿಮೆಯ ಹಾಡು॥1॥ ಕಸ್ತೂರಿಬಾ ಕಮಲಾನೆಹರು ನಮ್ಮ ಮಹಿಳೆಯರ ಮಾದರಿ। ಕಡುಕಷ್ಟದಲಿ ಕೆಚ್ಚು ತುಂಬುವಾ ಕನ್ನಡ ನಾಡಿನ ಸೋದರಿ। ಎಲ್ಲ ವಿರಸಗಳ ಎಲ್ಲ ಭೇದಗಳ ಮರೆತು ಎಲ್ಲರೊಂದಾಗೋಣ। ನಾಡ ಹಿತವೇ ನಮ್ಮ ಹಿತವೆಂದು ನಂಬಿ ಐಕ್ಯದಲಿ ದುಡಿಯೋಣ॥2॥ ನಾಡ ಮಕ್ಕಳೇ ನಾಡಗುಡಿಯ ಕಟ್ಟೋಣ ಬನ್ನಿರೋ ನಾವೆಲ್ಲ। ಒಟ್ಟಾಗಿ ನಾವು ಒಕ್ಕೊರಳಲ್ಲಿ ಜೈಹಿಂದ್ ಎಂದು ಹಾಡೋಣ॥3॥

### ಸ್ವಾತಂತ್ರ್ಯ ಬಂದು ಪಂಚದಶಕಗಳಾಗಿಹೋಯ್ತು

ಸ್ವಾತಂತ್ರ್ಯ ಬಂದು ಪಂಚದಶಕಗಳಾಗಿಹೋಯ್ತು। ಮತ್ತೆ ಪಾರತಂತ್ರ್ಯಕ್ಕಾಗಿ ನಾವುಕಾಯುತಿಹೆವು। ಸ್ವಾತಂತ್ರ್ಯಕ್ಕಾಗಿ ದುಡಿದು ಮಡಿದ ಮಹನೀಯರ ದಿನದಿನ ಕಳೆದಂತೆ ಮರೆಯುತಿಹೆವು॥1॥ ಎಲ್ಲೆಡೆಯಲ್ಲಿಯು ಭ್ರಷ್ಟಾಚಾರವ ಆಚರಣೆಯಲ್ಲಿ ತರುತಿಹೆವು। ಬದುಕಲು ಆಗದ ಸಾಯಲು ಆಗದ ತ್ರಿಶಂಕು ಸ್ಥಿತಿಯನು ತಲುಪಿಹೆವು। ಭಾರತ ದೇಶದ ಮೂಲೆ ಮೂಲೆಯಲಿ ಶಾಂತಿಯೆ ಇಲ್ಲದಂತೆ ಮಾಡಿಹೆವು। ತಾಯಿಯ ಹಾಲಲಿ ಹಾಲಾಹಲವನೆ ಬೆರೆಸುವ ಪ್ರಯತ್ನವ ಮಾಡುತಿಹೆವು॥2॥ ಇಲ್ಲದ ನರಕವ ಸೃಷ್ಟಿಸಿಕೊಂಡು ಕಷ್ಟಕೋಟಲೆ ಪಡುತಿಹೆವು। ಎಲ್ಲಕು ರಾಜಕೀಯ ಮೂಲವಾಗಿ ಮಾಡಿಕೊಳ್ವ ರಾಜಕಾರಣಿಯಾಗಿ ಹೊರಟಿಹೆವು। ಮುಗ್ಧ ಜನತೆಗೆ ಮುಟ್ಟದಾಸೆತೋರ್ಸಿ ಆಕಾಶಕ್ಕೇಣಿ ಹಾಕ್ವ ನಾಯಕರು। ಜನತೆಯ ರಕ್ತಹೀರಿ ಕೀಳುನಡತೆಯಲಿ ಜನಮನ ಗೆಲ್ವರು ಪುಢಾರಿಗಳು॥3॥ ಪಕ್ಷಬಿಟ್ಟು ಪಕ್ಷ ಸೇರಿ ಧಾಂಧಲೆ ಮಾಡುತಿಹ ಈ ದಾನವರು। ಕಾರ್ಗಿಲ್‌ನಲ್ಲಿ ನಮ್ಮ ಯೋಧರು ವೀರಮರಣ ಹೊಂದುತಿದ್ರು। ಪವಿತ್ರ ಜೀವನ ಪವಿತ್ರ ಭಾವವ ಕಲುಷಿತವನ್ನಾಗಿ ಮಾಡಲು ಇವರಿಗಾಗ। ಬೇಕಾಯ್ತು ಕುರ್ಚಿಗಾಗಿ ಚುನಾವಣೆ॥4॥ ಉಗ್ರಗಾಮಿಗಳ ನೆರವನು ಪಡೆದು ಪಾಕೀಸ್ತಾನವು ಮುಂದಾಯ್ತು ಸೇನೆಯು ಅದರಡಿ ನುಸಿಳಾಯ್ತು ಡಂಢಮ ಢಮಢಮ ಸಿಡಿವ ಮದ್ದು

ಗುಂಡುಗಳು ಜೀವದ ಹಂಗನು ತೊರೆಸಿತು। ಭಾರತ ದೇಶದ ನಮ್ಮ ಸೈನಿಕರು ರಕ್ಷಣೆಗೆಂದು ನುಗ್ಗಿದರು। ಭಾರತ ಮಾತೆಯ ಮಾನವ ಉಳಿಸಿತು ಚಿಗುರೊಡೆದುದು ರಾಷ್ಟ್ರಾಭಿಮಾನ॥5॥

## ವೃತ್ತಿ ಗೀತೆಗಳು

## ಅಂಬಿಗ ಮತ್ತು ಬೆಸ್ತ

**ಅಂಬಿಗರು ನಾವು ಅಂಬಿಗರು** **ರಾಗ:ಕುಂತಲವರಾಳಿ**

ಅಂಬಿಗರು ನಾವು ಅಂಬಿಗರು ನಾವು। ಬಾಳ ಕಡಲಿನ ಮುಕ್ತ ಯಾತ್ರಿಕರು ನಾವು॥ಪ॥ ಏಸೋ ಜನ್ಮದ ಪಯಣ ಒಂದು ಕ್ಷಣ ಮಿಲನಾ। ಯಾವುದೋ ಗುರಿಯೆಡೆಗೆ ತಿರುಗಿಯಾನಾ। ಬಾಳಿಂದ ಸಾಗುತಿದೆ ಯುಗಯುಗಾಂತರ ದಿಂದೆ। ತಿರುಗಿ ಹಿಮ್ಮೆಟ್ಟುತಿದೆ ಜನನ ಮರಣ॥1॥ ನಮ್ಮ ದೇಹವೇ ದೋಣಿ ನಮ್ಮ ದೇಹವೇ ಶಕ್ತಿ। ನಮಗೆ ನಾವೇ ಅನ್ನದಾತರಯ್ಯಾ। ಯಾವುದೋ ಬಿರುಗಾಳಿ ಎಲ್ಲಿಂದಲೋ ಬೀಸಿ। ಕಾಯ್ವ ದೈವಕೆ ಶರಣು ಶರಣಯ್ಯಾ॥2॥

**ಕಡಲಾ ತೀರದ ದಂಡೆಯ ಮೇಲೆ** **ರಾಗ: ಮೋಹನ**

ಕಡಲಾ ತೀರದ ದಂಡೆಯ ಮೇಲೆ ತೆಂಗಿನ ಬನದಾಗಾ ಹೋಯ್ ತೆಂಗಿನ ಬನದಾಗಾ ಹೋಯ್॥ಪ॥ ಬಾನ್ಹುಕ್ಕಿ ಎದ್ದಾಗ ಕೋಳಿಯು ಕೂಗಿದಾಗ (2ಸಾರಿ) ನಾವು ಬೆಸ್ತರ ಹೆಣ್ಣಲ್ಲವೇ ಹೋಯ್ ನಾವು ಬೆಸ್ತರ ಗಂಡಲ್ಲವೆ ಹೋಯ್। ಹೊಯ್ಯಾರೋ ಹೋಯ್ಯರು ಹೋಯ್ಯ ಹೋಯ್ಯಾರೋ ಹೋಯ್॥1॥ ಗುಡಿಸಲ ಕಟ್ಟಿಕೊಂಡು ಇರುವೆವು ನಾವು॥2ಸಾರಿ॥ ನಾವು ಬೆಸ್ತರ ಹೆಣ್ಣಲ್ಲವೆ ಹೋಯ್ ಹೋಯ್। ನಾವು ಬೆಸ್ತರ ಗಂಡಲ್ಲವೆ ಹೊಯ್ ಹೊಯ್। ಹೊಯ್ಯಾರೆ ಹೊಯ್ಯರು ಹೋಯ್ ಹೋಯ್॥2॥ ಬಂತು ಸುನಾಮಿ ಬೆಸ್ತರ ಬಾಳೆಲ್ಲ ಬರಡಾಯ್ತು ಮುಂದೆ ಗತಿ ಏನಪ್ಪ ಸಮುದ್ರ ರಾಜನೆ ಮತಿಗೆಟ್ಟು ನಾವು ಕುಳಿತಿಹೆವಪ್ಪ ॥3॥ ನಮ್ಮಯ ದೇವರು ನೀನೆಂದು ನಂಬಿಹೆವು ಎಂದಿಗೂ ನೀ ಕೈ ಬಿಡಬೇಡ ಕರುಣೆಸು ಹರಸಿ ಬಾಳ್ವೆಗೆ ದಾರಿಯ ತೋರಿಸು ॥4॥ ಕ್ರೋಧದಿ ನೀ ಉಕ್ಕಿ ಬೆಸ್ತರ ಕುಡಿಯ ಚಿವುಟಿ ಬಿಟ್ಟೆ ಭಯದಿಂದ ಕಂಗೆಟ್ಟ ನಮಗೆ ವೃತ್ತಿಯ ಬೆಳೆಸಲು ಸಹಕರಿಸಯ್ಯ॥5॥ ಪ್ರಕೃತಿ ಮಾತೆಯೆ ನಿನ್ನ ಗರ್ಭದ ಸಂರಕ್ಷಣೆ ಮಾಡಮ್ಮ। ನಿನ್ನ ಮಡಿಲಲ್ಲಿ ಹಾಡುತ್ತ ನಲಿಯುವ ಸಂತೋಷ ನೆಮ್ಮದಿ ನೀಡಮ್ಮ॥6॥

**ಕಡಲಿನ ಮಕ್ಕಳು ನಾವು**

ಹೈ ಜೋಲೆ ಲಾಲಿ ಹೈ ಜೋಲೆ ಲಾಲಿ। ಕಡಲಿನ ಮಕ್ಕಳು ನಾವು ನಡುಬಿಗಿದ ವೀರರು ನಾವು ರಟ್ಟೇ ಬಿಗಿದು ಹುಟ್ಟು ಹಾಕಿ ಕಟ್ಟೆ ಮುರಿದು ದೋಣಿಯಲಿ। ಅಲೆಗಳ ಸೇರಿ ಸಾಗರ ಸೇರಿ ಗಾಳಿಯ ಬೀಸಿಗೆ ತೂಗುತಲಿ ಕಡಲಡಿಗೆ ನಾ ಕಾಣದ ಕೇಳದ (ಪಡುನಾಡಿನ ಅಂಬಿಗರು)॥2ಸಾರಿ॥ ಬಿಸಿಲಿನ ಬೇಗೆಗೆ ಹಗಲಿಡೀ ದುಡಿದೂ ಬೈಗಿಗೇ ಸೇರ್ವೆವು ದಡದಡಕೆ। ಕಡಲಿನ ಜೋಗುಳವ ನಾಲಿಸಿ ಮರೆವೆವು (ದಣಿದೀ ದೇಹದ ಬಳಲಿಕೆಯ)॥2ಸಾರಿ॥ ಈ ಕಡಲು ನಮ್ಮಯ ಜೀವನವು ಈ ಕಡಲು ನಮ್ಮಯ ಸಂತೋಷವು। ನೀರ ಮೇಲಕೆ ದೂರ ದೂರಕೆ (ನೇರ ನೇರನೆ ಸಾಗುವೆವು)॥2ಸಾರಿ॥

**ಸಾಗಿತೂ ತೇಲಿತೂ ಸೇರಿತು**

ಹಯ್ಯ ಓ ಹಯರೆ ಹಯ ಹಯ್ಯ ಓ ಹೊಯ್ಯ॥4ಸಾರಿ॥ ಸಾಗಿತೂ ತೇಲೀತೂ ಸೇರಿತೂ ನೌಕೆಯು। ಹಯ್ಯರೆ ಓ ಹಯರೆ ಹಯ ಹಯ್ಯ। ಓ ಹಯ್ಯ ಮೂಡಣದ ಗಿರಿಯೊಳಗೆ ರವಿ ಬಂದು ಸೇರಿದ। ನಾವಿಕರ ನೌಕೆಯಲಿ ಜೊತೆಗೂಡಿ ತೇಲಿದ। ತಣ್ಣನೆಯ ಗಾಳಿಯಲಿ ಮಧುರ ಮನವ ನೊಲಿಸಿದ। ಅ... ಅ... ಬಾನಿನ ಬಾನೊಳು ತನುಮನವ ತಣಿಸಿದ॥1॥ ಮೋಡಗಳ ಸಿರಿಗೆಂಪು ತೆರೆ ತೆರೆಗೆ ಹರಡಿಹುದು। ಅಲೆಯಾಗಿ ತೆರೆಯಾಗಿ ಒಡೆದೊಡೆದು

ಮೂಡುವುದು। ತಿಳಿನೀಲ ಬಾನಿನಲಿ ಬಿಳಿಮುಗಿಲು ತೇಲುತಿದೆ। ಸವಿಗಾನ... ಸಮತಾನ... ಸಮರಸವೇ ಜೀವನ॥2॥ ಬರಡಾದ ಬದುಕಿಗೆ ನವಚೇತನ ತುಂಬಿದೆ। ಸವಿಯಾದ ಇಂಪಾದ ನವಗೀತೆ ಚಿಮ್ಮಿದೆ। ಹಗಲಿನಲಿ ಕೋಗಿಲೆಯ ಇನಿದನಿಯು ಕೇಳುತಿದೆ। ಸವಿಗಾನ... ಸಮತಾನ... ಸಮರಸವೇ ಜೀವನ... ॥3॥

**ಸಾಗುವಾ ದೂರ ತೀರ ಸೇರುವಾ** **ರಾಗ: ಖರಹರಪ್ರಿಯ**

ಸಾಗುವಾ ದೂರ ತೀರ ಸಾಗುವಾ ದೂರತೀರ ಸೇರುವಾ ...। ಹೊಯ್ಯಾರೇ ಹೊಯ್ಯಾರೆ ಹೊಯ್॥ ನದಿಯೊಂದು ಹರಿಯುತಿದೆ ಕೊನೆ ಎಲ್ಲಿಗೋ...ಓ...॥ ದೋಣಿಯೊಂದು ಸಾಗುತಿದೆ ಗುರಿಎಲ್ಲಿಗೋ। ಝುಳುರುಝುಳುನೇ ಹರಿಯುತಿಹ ... ಆ... ಅಲೆಗಳ ನಡುವೆ ಏರುತ್ತಾ ಇಳಿಯುತಾ ... ॥1॥ ದೂರದಿಂದ ಬಂದಿಹೆವು ಸೇರುವೆವು ಇಂದು... ಓ... ದೂರದಿಂದ ಬಂದಿಹೆವು ಸೇರುವೆವು ಇಂದು... ॥ ಸಾಗುವೆವು ಒಂದಾಗಿ ಗುರಿ ಎಲ್ಲ ಒಂದು। ಜೀವನದಿ ಸುಳಿಗಾಳಿ -ಬಿರುಗಾಳಿ ಮಧ್ಯೆ। ಎಲ್ಲವನು ಸಹಿಸುತ್ತಾ...॥2ಸಾರಿ॥2॥

**ಹಾಕಯ್ಯ ಹರಿಗೋಲ ನೂಕಯ್ಯ** **ರಾಗ: ಮೋಹನ**

ಹೊಯ್ಯಾರೆ ಹೊಯ್ ಹೊಯ್ ಹೊಯ್ಯಾರೆ ಹೊಯ್ । ಹಾಕಯ್ಯ ಹರಿಗೋಲ ನೂಕಯ್ಯ ತೆಪ್ಪ। ಜೋಕೇಲಿ ನಮ್ಮ ಕಳುಹಯ್ಯ। ಕನ್ನಂಬಾಡಿ ಗೋಪುರವ ನೋಡಿ ಬರ್ತೇವೆ। ಜೋಕೇಲಿ ನಮ್ಮ ಕಳುಹಯ್ಯ॥ ಕನ್ನಂಬಾಡಿ ಒಳಗೆ ಏನೇನು ವೈಭೋಗ। ಯಾರು ಒಂಟವರೇ ನವಿಲ್ಲಂಗೆ(2ಸಾರಿ) ಕಾಳವ್ವ। ಒಂಟವರೇ ತಾನು ನವಿಲ್ಲಂಗೆ॥ಹಾಕಯ್ಯ॥ ಕೊಡಗು ಸೀಮೆಯಿಂದ ತರಿಸ್ಯಾರೆ ಬಣ್ಣದ। ಅರಸಿ ಕಾಳಮ್ಮನಗುಡಿಯಲ್ಲಿ(2ಸಾರಿ) ಬಾಗಿಲ್ಮುಂದೆ। ನಿಲ್ಸ್ಯಾರ ನೀಲಿ ಕುದುರೆಯ ॥ಹಾಕಯ್ಯ॥ ಪಟ್ಟಣಕ್ಕೆ ಪಡಸಾಲೆ ಮೈಸೂರ್ಗೆ ಕೈಸಾಲೆ। ಕನ್ನಂಬಾಡಿಲಿ ಕಡು ಚೆಲುವೆ ಕಾಳವ್ವ। ದೂರದಿಂದ ಕೈಯ ಮುಗಿದೇವು॥

## ಬಳೆಗಾರ

**ಅಚ್ಚನೀಲದ ಕೆಂಪು ಬಳೆಯೂ** **ರಾಗ: ಮನೋಹರಿ**

ಅಚ್ಚನೀಲದ ಕೆಂಪು ಬಳೆಯೂ। ಒಳ್ಳೆ ಸ್ವಚ್ಛ ವಜ್ರದ ಬಳೆಯೂ। ಕರಿಯ ಕಾಂತಿಯ ಬಳೆ ಹವಳದ ಬಳೆ। ಮುತ್ತಿನ ಬಳೆ ಮಾಣಿಕ್ಯ ಖಚಿತವಾದ ವೈಢೂರ್ಯದ ವಂಕಿಪಟ್ಟೆ ಬಳೆಯ। ನೀಡುವೆನಮ್ಮ ನಿಮಗೇ। ನಿಮ್ಮ ಚೆಲುವ ಹಸ್ತವ ತೋರೆನಗೇ॥1॥ ಗೀರುದಾರಿಯ ಸಣ್ಣ ಬಳೆಯೂ। ಪುಷ್ಪರಾಗ ಖಚಿತವಾದ ಬಳೆಯೂ। ಗೋಮೇಧಿಕದ ಬಳೆ। ನೀಲದೊಜ್ರದ ಬಳೆ। ನಾನಾ ರತ್ನಗಳಿಂದ। ನವನೂತನವಾದಂಥ॥2॥ ಸುರಸತಿಯರು ಆರುತಿಯಾ। ನೆತ್ತಿ ತಳಿದರು ಪುಷ್ಪದಕ್ಷತೆಯ। ಧರೆಯೊಳ್ಯಾದವಗಿರಿ ವರನಿಲಯ ಪೊರೆಯುವ। ನರಸಿಂಹ ಪುರದಲ್ಲಿ ನೆಲಸಿರುವ ಸುಂದರಿಯ ನಾಲ್ಕು ಹಸ್ತಕ್ಕೆ॥3॥

**ಬಳೆಗಾರ ಚೆನ್ನಯ್ಯ ಬಾಗಿಲಿಗೆ** **ರಾಗ: ಸಾವೇರಿ**

ಬಳೆಗಾರ ಚೆನ್ನಯ್ಯ ಬಾಗಿಲಿಗೆ ಬಂದಿಹೆನು। ಒಳಗೆ ಬರಲಪ್ಪಣೆಯೆ ದೊರೆಯೆ? ನವಿಲೂರ ಮನೆಯಿಂದ ನುಡಿಯೊಂದ ತಂದಿಹೆನು। ಬಳೆಯ ತೊಡಿಸುವುದಿಲ್ಲ ನಿಮಗೆ॥1॥ ಮುಡಿದ ಮಲ್ಲಿಗೆಯರಳು ಬಾಡಿಲ್ಲ ರಾಯರೇ। ತೌರಿನಲಿ ತಾಯಿ ನಗುತಿಹರು। ಕುಡಿದನೀರಲುಗಿಲ್ಲ ಕೊರಗದಿರಿ ರಾಯರೇ ಅಮ್ಮನಿಗೆ ಬಳೆಯ ತೊಡಿಸಿದರು॥2॥ ಅಂದು ಮಂಗಳವಾರ ನವಿಲೂರ ಕೇರಿಯಲಿ। ಓಲಗದ ಸದ್ದು ತುಂಬಿತ್ತು। ಬಳೆಯ ತೊಡಿಸಿದರಂದು ಅಮ್ಮನಿಗೆ ತೌರಿನಲಿ॥3॥ ಅಂಗಳದ ತುಂಬ ಜನವಿತ್ತು। ಹಬ್ಬದೂಟವನುಂಡು ಹಸೆಗೆ ಬಂದರು ತಾಯಿ। ಹೊಳೆದಿತ್ತು ಕೊರಳಿನಲಿ ಪದಕ। ಒಬ್ಬರೇ ಹಸೆಗೆ ಬಂದರು ತಾಯಿ ಬಿಂಕದಲಿ॥4॥ ಕಣ್ತುಂಬ ನೋಡಿದೆನು ಮುದುಕ। ಸಿರಿಗೌರಿಯಂತೆ ಬಂದರು ತಾಯಿ ಹಸೆಮಣೆಗೆ। ಸೆರಗಿನಲಿ ಕಣ್ಣೀರನೊರಸಿ। ಸುಖದೊಳಗೆ ನಿಮ್ಮ ನೆನೆದರು ತಾಯಿ ಗುಣವಂತೆ॥5॥

ದೀಪದಲಿ ಬಿಡುಗಣ್ಣ ನಿಲ್ಲಿಸಿ। ಬೇಕಾದ ಹಣ್ಣಿಹುದು ಹೂವಿಹುದು ತೌರಿನಲಿ। ಹೊಸಸೀರೆ ರತ್ನದಾಭರಣ। ತಾಯಿ ಕೊರಗುವರಲ್ಲಿ ನೀವಿಲ್ಲಿ ದೂರದಲಿ ನಿಮಗಿಲ್ಲ ಒಂದು ಹನಿ ಕರುಣ॥6॥ ದಿನವಾದ ಬಸುರಿ ಉಸ್ಸೆಂದು ನಿಟ್ಟುಸಿರೆಳೆದು। ಕುದಿಯಬಾರದು ನನ್ನ ದೊರೆಯೇ। ಹಿಂಡಬಾರದು ದುಂಡು ಮಲ್ಲಿಗೆಯ ದಂಡೆಯನು। ಒಣಗಬಾರದು ಒಡಲ ಚಿಲುಮೆ॥7॥ ಮುನಿಸು ಮಾವನ ಮೇಲೆ ಮಗಳೇನ ಮಾಡಿದಳು। ನಿಮಗೇತಕೀ ಕಲ್ಲು ಮನಸು? ಹೋಗಿ ಬನ್ನಿರಿ ಒಮ್ಮೆ ಕೈ ಮುಗಿದು ಬೇಡುವೆನು। ಅಮ್ಮನಿಗೆ ನಿಮ್ಮದೇ ಕನಸು॥8॥

**ಭಾಗ್ಯದ ಬಳೆಗಾರ ಹೋಗಿ ಬಾ** **ರಾಗ: ಶ್ರೀ**

ಭಾಗ್ಯದ ಬಳೆಗಾರ ಹೋಗಿ ಬಾ ನನ್ ತೌರೀಗೆ। ನಮ್ಮ ನಾಡಲ್ಲಿ ಬಳೆಯಿಲ್ಲ ಬಳೆಗಾರ। ಹೋಗಿ ಬಾರಯ್ಯ ತೌರೀಗೆ॥3ಸಾರಿ॥ಪ॥ ನಿನ್ನ ತವರೂರ ನಾನೇನು ಬಲ್ಲೆನು। ಗೊತ್ತಿಲ್ಲ ನನಗೆ ಗುರಿಯಿಲ್ಲ ಓಬಾಲೆ। ತೋರಿಸು ತವರೂರು ಹಾದೀಯ॥ಅ.ಪ.॥ ಬಾಳೆ ಬಲಕೇ ಬೀಡು। ಸೀಬೇ ಎಡಕೇ ಬೀಡು। ನಟ್ಟ ನಡುವೆ ಹೋರಟ್ಹೋಗು ಬಳೆಗಾರ। ಅಲ್ಲಿರುವುದು ನನ್ನ ತವರೂರು॥1॥ ಅಂಚೀನ ಮನೆ ಕಾಣೊ। ಕಂಚೀನ ಕದಕಾಣೊ। ಇಂಚಾಡುವೆರೆಡು ಗಿಣಿಕಾಣೊ ಬಳೆಗಾರ। ಅದೇ ಕಣೋ ನನ್ನ ತವರೂರು॥2॥ ಮುತ್ತೈದೆ ಹಟ್ಟೀಲಿ ಮುತ್ತಿನ ಚಪ್ಪರ ಹೂಡಿ। ನಟ್ಟ ನಡುವೆ ಪಗಡೇಯನಾಡ್ತಾಳೆ। ಅವಳೇ ಕಣಯ್ಯ ನನ್ನ ಹಡೆದವ್ವಾ॥2ಸಾರಿ॥ ॥3॥ ಅಚ್ಚ ಕೆಂಪಿನ ಬಳೆ ಕರಿಯ ಪಟ್ಟೀ ಬಳೆ। ನನ್ನ ಹಡೆದವ್ವಗೆ ಬಲು ಆಸೆ ಬಳೆಗಾರ। ಕೊಂಡ್ಹೋಗೋ ನನ್ನ ತವರೀಗೆ॥4॥ ಬೆಂಕಿ ಪೊಟ್ಟಣದಿಂದ ವಂಕೀ ಬಳೇ ಬಂದೋ। ಸಾರಿಕೊಂಡ್ಹೋಗೋ ತವರಲ್ಲಿ। ಸುತ್ತಿ ಬಾರಯ್ಯ ಬಳೆಗಾರ॥5॥ ಆಲೆ ಆಡುತ್ತಾವೆ ಗಾಣ ತಿರುಗುತ್ತಾವೆ। ನವಿಲು ಸಾರಂಗ ನಲಿತಾವೆ ಬಳೆಗಾರ। ಅಲ್ಲೆ ಮುತ್ತೈದೆ ಬಳೆಯ ತೊಡುತಾಳೆ॥6॥ ಬಡಗಲ ಸೀಮಿಂದ ಬಣ್ಣದ ಬಳೆತಂದು। ಸೆಟ್ಟಿ ಅಣ್ಣಯ್ಯ ನೀ ತೊಡಿಸದಿದ್ದರೆ। ನಿನ್ನ ದಟ್ಟಿಯ ಸೆರಗ ಬಿಡೆನಲ್ಲೋ॥7॥ ಇನ್ನೆಲ್ಲಿ ನೋಡಲಿಂಥ ಬಳೆಯ। ಬಳೆಗಾರಸೆಟ್ಟಿ ಹೋಗಯ್ಯ ನನ್ನ ತವರೀಗೆ॥8॥

## ಕುಂಬಾರ

**ಕುಂಬಾರಾ2 ಸಂತೆಗೆ ಹೊರಟನು** **ರಾಗ:ಶಿವರಂಜನಿ**

ಕುಂಬಾರಾ ಕುಂಬಾರಾ ಸಂತೆಗೆ ಹೊರಟನು ಕುಂಬಾರಾ। ಮಡಕೆಯ ಮಾರಲು ಕುಂಬಾರಾ। ಸಂತೆಗೆ ಹೊರಟನು ಕುಂಬಾರಾ॥ ಕೆಮ್ಮಣ್ಣನು ತಂದನು ಕುಂಬಾರ ನೀರಲಿ ಕಲೆಸಿದ ಕುಂಬಾರ। ಕಚಪಚತುಳಿದನು ಕುಂಬಾರ ಮಣ್ಣಮುದ್ದೆಯ ಮಾಡಿದ ಕುಂಬಾರ। ಚಕ್ರವ ತಂದನು ಕುಂಬಾರ ಮಣ್ಣಮುದ್ದೆಯ ಇಟ್ಟನು ಕುಂಬಾರ। ಗರಗರ ಚಕ್ರವ ತಿರಗಿಸುತಾ ಮಣ್ಣ ಮಡಕೆಯಮಾಡಿದ ಕುಂಬಾರ॥ ಚಕ್ರದ ಮೇಲಿಂದ ಮಡಕೆಯನು ಕುಶಲದಿ ಇಳಿಸಿದ ಕುಂಬಾರ। ಬಿಸಿ ಹೊಗೆಯಲಿ ಕಾಯಿಸಿಕಾಯಿಸಿ ಹೊಸ ಮಡಿಕೆಯ ತೆಗೆದನು ಕುಂಬಾರ। ಕಿಣುಕಿಣು ಎತ್ತಿನ ಗೆಜ್ಜೆಯ ಗಾಡಿಯಲಿಮಡಕೆಯ ತುಂಬಿದ ಕುಂಬಾರ। ಆನಂದದಿ ಹುಷ್ ಹುಷ್ ಎನ್ನುತ ಕುಂಬಾರ॥

**ತಿಗರಿ ತಿರುಗಿ ಮುಂದೆ ಸಾಗಿ** **ರಾಗ: ಮಾಂಡ್**

ತಿಗರಿ ತಿರುಗಿ ಮುಂದೆ ಸಾಗಿ ಕುಂಬಾರನ ಬದುಕಿನಾಸರೆಯಾಗಿ। ಬಡವರ ಆತ್ಮ ಬಂಧುವಾಗಿ ಪೇಟೆದಾರಿಕಡೆಗೆ ಸಾಗಿದೆ॥ಪ॥ ಮಣ್ಣಿನಿಂದ ಮುದ್ದೆಯಾಗಿ ಕೈಯಿಂದ ಮಡಕೆಯಾಗಿ। ಬೆಂಕಿಯಿಂದ ಗಟ್ಟಿಯಾಗಿ ನವ್ಯರೂಪ ಹೊಂದಿದೆ॥1॥ ಹರುಷ ಹೆಚ್ಚಿ ವರುಷ ತುಂಬಿ ಮನತುಂಬಿ ಮನೆ ತುಂಬಿ। ಚಿಗುರಿ ಬಲಿತು ಬೇರು ಬಿಟ್ಟು ಅಂತರಾಳದಲಿ ಬೀಡುಬಿಟ್ಟಿದೆ॥2॥ ದಿನ ಚಕ್ರಉರುಳಿದಂತೆ ಜನ್ಮ ತಾಳುವಾ ಮಕ್ಕಳಂತೆ। ರೂಪುಗೊಂಡು ನಲಿದಿದೆ ತನ್ನ ತನವ ಪಡೆದಿದೆ॥3॥

### ಮುಂಜಾನೆದ್ದು ಕುಂಬಾರಣ್ಣಾ

ಮುಂಜಾನೆದ್ದು ಕುಂಬಾರಣ್ಣ ಹಾಲು ಬಾನುಂಡಾನ। ಹಾರ್ವಾರಿ ಮಣ್ಣಾ ತುಳಿದಾನೆ। ಹಾರಿ ಹಾರ್ವಾರಿ ಮಣ್ಣಾ ತುಳಿಯೂತ ಮಾಡ್ಯಾನ ನಾರ್‍ಯಾರು ಹೊರುವಂಥ ಹೈರಾಣೆ।। ಒತ್ತಾರೆದ್ದು ಕುಂಬಾರಣ್ಣ ತುಪ್ಪ ಬಾನುಂಡಾನ ಗಟ್ಟೀಸಿ ಮಣ್ಣಾ ತುಳಿದಾನ। ಗಟ್ಟೀಸಿ ಮಣ್ಣಾ ತುಳಿಯೂತಾ ಮಾಡ್ಯಾನ ಮಿತ್ರೇರು ಹೊರುವಂಥ ಹೈರಾಣೆ।।1।। ನಿಂಬೆಯ ಹಣ್ಣಂಗೆ ದುಂಡ್ಡಗ್ಗ ಹಿಡ್ಡಕೊಂಡು ಗುಂಡೀಲಿ ಮಣ್ಣಾ ತುಳಿಯೋನೆ।।2ಸಾರಿ।। ಕುಂಬಾರಣ್ಣ ಹಾಯಾಗಿ ಮಾಡೋ ಅಸಿಕರಗ।।2।। ನಾ ಮಾಡಿದಾ ಕರಗ ನೀನೇನು ನೋಡಿಯೇ ಸಾರಂಗನೂರು ಗಿಳಿನೂರು।।2ಸಾರಿ।। ಎಲೆ ತಂಗಿ ಗಿರಿಯ ತೌರಿನ ಭಾವ ಬರೆದಿವ್ನಿ।।3।। ಚೀಪೀಯ ಹೂವ್ನಂಗೆ ಬೆನ್ನುಂಗ್ರ ಹಿಡಕೊಂಡು ದೊಣ್ಣೇಲಿ ಚಕ್ರ ತಿರುವೋನೇ।।2ಸಾರಿ।। ಕುಂಬಾರಣ್ಣ ಚಂದಾಗಿ ಮಾಡೋ ಅಸಿಕರಗ।।4।। ಕುಂಬಾರಣ್ಣನಾ ಮಡದಿ ಕೊಡದಾಗೆ ಕೈಯಿಕ್ಕಿ। ಕೊಡದಾ ಮ್ಯಾಗೇನ ಬರೆದಾಳ।।2ಸಾರಿ।। ಕಲ್ಯಾಣದ ಶರಣ ಬಸವನ ನಿಲಿಸ್ಯಾಳಾ।।5।। ಬ್ಯಾಳೀ ಬೆಲ್ಲಾ ಅಕ್ಕಿಹಿಟ್ಟು ತಂದಿವ್ನಿ। ತಾಲೀಲಿ ತಂದೀನಿ ತಿಳಿದುಪ್ಪ।।2ಸಾರಿ।। ಕುಂಬಾರಣ್ಣ ತಂದೀಡು ನಮ್ಮ ಹೈರಾಣೆ।।6।।

## ಕರಡಿ ಕುಣಿತ

### ಕಬ್ಬಿಣ ಕೈ ಕಡಗ ಕುಣಿಗೋಲು — ರಾಗ:ಶುದ್ಧಸಾವೇರಿ

ಕಬ್ಬಿಣ ಕೈಕಡಗ ಕುಣಿಗೋಲು ಕೂದಲು ಕಂಬಳಿ ಹೊದ್ದಾಂವ ಬಂದಾನ। ಗುಣುಗುಣು ಗುಟ್ಟುತ ಕಡಗವ ಕುಟ್ಟುತ ಕರಡಿಯನಾಡಿಸುತ ನಿಂದಾನ।। ಯಾವ ಕಾಡಡವಿಯಲಿ ಜೇನುಂಡು ಬೆಳೆದಿದ್ದ ಜಾಂಬುವಂತನ ಹಿಡಿದು ತಂದಾನ?। 'ಧಣಿಯರ ಮನಿಮುಂದ ಕಾವಲು ಮಾಡಣ್ಣ ಧಣಿ ದಾನ ಕೊಡುವನು' ಅಂದಾನ।। ತ್ರೇತಾಯುಗದ ರಾಮನ್ನ ದ್ವಾಪರದ ಕೃಷ್ಣನ ಕಲಿಯುಗದ ಕಲ್ಕೀನ ಕಂಡಾನ। ಜಾಂಬುನದಿ ದಂಡೆಯ ಜಂಬುನೀರಲಹಣ್ಣು ಕೃತಯುಗದ ಕೊನೆಗೀಂವಾ ಉಂಡಾನ।। ಬಂದಾರೆ ಬರ್‍ರೆವ್ವ, ಕಂದನ್ನ ತರ್‍ರೆವ್ವಅಂಜೀಕಿ ಗಿಂಜೀಕಿ ಕೊಂದಾನ। ರೋಮ ರೋಮಗಳಲ್ಲಿ ಭೀಮರಕ್ಷೆಯ ಬಲ ಕೊರಳಾಗ ಕಟ್ಟರಿ ಒಂದಾನ।। 'ಕುಣಿಯಲೆ ಮಗನೆ ನೀ' ಅನ್ನೊದೋಂದೇ ತಡ ತನ್ನ್ಽನ ತಾನ್ಽನ ತಂದಾ್ಽನ। ಮುದ್ದು ಕೂಸಿನಹಾಗೆ ಮುಸುಮುಸು ಮಾಡುತ್ತ ಕುಣಿದಾನ ಕುಣಿತ್ಽವ ಛಂದಾನ।। ಹೊಟ್ಟೆಗಿಲ್ಲದವರ ಹೊಟ್ಟೆಗೆ ಹಾಕಲು ನಡೆದಾನ ಪಡೆದಾನ ಬಂದಾನ। 'ಕುಣಿಸುವವರ ಹೊಟ್ಟೆ ತಣ್ಣಾಗಾಗಲಿ'ಎಂದು ಮುಗಿಲಿಗೆ ಕೈ ಮುಗಿದು ನಿಂದಾನ।।ಮನಬಲ್ಲ ಮಾನವ ಕುಣಿದಾನ ಕುಣಿಸ್ಯಾನ ಪ್ರಾಣದ ಈ ಪ್ರಾಣಿ ಹಿಂದಾ್ಽನ। ಕರಡಿಯ ಹೆಸರೀಲೆ ಚರಿತಾರ್ಥ ನಡಿಸ್ಯಾನ ಪರಮಾರ್ಥ ಎಂಬಂತೆ ಬಂದಾನ।। ಈ ಮನುಷಾ ಎಂದಿಂದೊ ಕವಲೆತ್ತು ಕೋಡಗ ತನಗಾಗಿ ಕುಣಿಸುತ್ತ ನಡದಾನ। ಕರಡೀ ಕುಣಿತಕ್ಕಿಂತ ನರರ ಬುದ್ಧಿಯ ಕುಣಿತ ಮಿಗಿಲಹುದು ಕವಿ ಕಂಡು ನುಡಿದಾನ।।

### ಕರಡಿಯ ಥಕಥಕ ಕುಣಿಸುತ — ರಾಗ: ಶುದ್ಧ ಸಾವೇರಿ

ಕರಡಿಯ ಥಕಥಕ ಕುಣಿಸುತ ಬಂದನು ಸಿದ್ದಿರ ಬಾವಾ ಬಾಲರ ಜೀವ। ಬಾಬಾ ಬಾವಾ ಬಾಲರ ಜೀವಾ ಕರಡಿಯ ಕುಣಿಸುತ ಬಾಬಾ।। ಊರಿನ ಹುಡುಗರ ಹಿಗ್ಗನು ಹೆಚ್ಚಿಸಿ ಉಬ್ಬಿಸಿ ಹಾರಿಸಿ ಬಾಬಾ। ಬಾಬಾ ಬಾವಾ ಬಾಲರ ಜೀವಾ।। ಕರಡಿಯ ಕೊರಳೊಳು ಕವಡೆಯ ಸರವು। ಕಾಲಿನ ಗೆಜ್ಜೆಯ ನುಡಿಸುತ ಬಾ। ಎರಡೇ ಕಾಲಲಿ ನಿಲ್ಲಿಸಿ ನಡೆಸುತ ನಮ್ಮನು ನಗಿಸಲು ಬಾಬಾ। ಬಾಬಾ ಬಾವಾ ಬಾಲರ ಜೀವಾ।। ಮೂಗಿನ ಮೇಗಡೆ ಮುಂಗಾಲಿರಿಸಿ ಸಲಾಮು ಹೊಡೆಸಲು ಬಾಬಾ। ಮೈಯ ಕೂದಲನು ಪಟಪಟ ಜಾಡಿಸಿ ನಮ್ಮನು ನಲಿಸಲು ಬಾಬಾ। ಬಾಬಾ ಬಾವಾ ಬಾಲರ ಜೀವಾ।। ಢಮಢಮ ಢಮರುಗ ಬಾರಿಸಿ ಬಾವಾ ಊರಿಗೆ ಊರನೆ ಎಬ್ಬಿಸಿ ಬಾ। ವರುಷಕ್ಕೊಮ್ಮೆ ಕರಡಿಯ ಕುಣಿಸಿ ನಮ್ಮನು ನಗಿಸಲು ಬಾಬಾ। ಬಾಬಾ ಬಾವಾ ಬಾಲರ ಜೀವಾ ಕರಡಿಯ ಕುಣಿಸುತ ಬಾಬಾ।।

## ಕೊರವಂಜಿ

**ಕಣಿಯಾ ನಾ ಹೇಳಬಂದೆ** **ರಾಗ:ಕುರಂಜಿ**

ಕಣಿಯಾ ನಾ ಹೇಳಬಂದೆ ಮಲೆನಾಡಿನ ಕೊರವಂಜಿ। ಮದ್ದು ಮಾಟ ಮಾಡಬಲ್ಲೆ ಹೇಳಲಾರೆ ಕಟ್ಟು ಕಥೆಯಾ॥ಪ॥ ಕೈ ನೋಡಿ ನಾನೊಂದು ಕಣಿ ಹೇಳುತ್ತೇನೆ। ಕೊರವೀಯ ಮಾತನ್ನು ನೀನಂಬಬೇಕು। ಚುಕ್ಕಿ ಬೆಳ್ಳಿ ಬೆಳಗಿದಾಗ ಬೆಳ್ಳಿ ಮೋಡ ಕರಗಿದಾಗ। ಬಂದೆನು ನಡೆ ತಂದೆನು। ಹತ್ತು ಸಾರಿ ನಾಡನೆಲ್ಲ ಸುತ್ತಿ ಬಂದೆ। ಮುತ್ತಿನಂಥ ಮಾತ ಹೇಳಿ ಹೋಗಿ ಬರುವೆ ಮತ್ತೆ॥

**ಕೊರವಿ ಬಂದಾಳಮ್ಮ** **ರಾಗ:ಆನಂದಭೈರವಿ**

ಕೊರವಿ ಬಂದಾಳಮ್ಮ ಇಲ್ಲಿಗೆ। ಈ ಕೇರಿಗೆ॥ಪ॥ ಕೊರವಿ ಬಂದಾಳಮ್ಮ ಇಲ್ಲೆ। ಖರೆಯ ಮಾತ ಪೇಳುತಿಹಳು। ಪುರದ ಜನರು ನೆರೆದು ಬಹಳ ಆದರ ಬಟ್ಟು ಕೇಳುತಿಹರು॥1॥ ಹೃದಯ ಭಾವ ಬಲ್ಲವಳು ಮಧುರ ಮಾತ ನಾಡುತಿಹಳು। ಮುದದಿ ಕೇಳಿದ್ದೇಳುವವಳು। ಮುದುಕಿಯಾಗಿ ತೋರುತಿಹಳು॥2॥ ಚಿಕ್ಕ ಹೆಣ್ಣು ಮಕ್ಕಳಿಗೆ। ತಕ್ಕ ವರರ ಹೇಳುತಿಹಳು। ಮಕ್ಕಳ ಹೇಳುವವಳು ತನ್ನ ಮಕ್ಕಳಾಣೆ ಕೊಡುತಿಹಳು॥3॥ ನರನಾರಾಯಣರು ಎಲ್ಲಿರುವರಲ್ಲೆ ಇರುವಳಂತೆ। ವರದನಂತಾದ್ರೀಶ ಕೊಟ್ಟ। ವರವುಳ್ಳ ಕೊರವಿಯಂತೆ॥4॥

**ಕೊಲ್ಲಿ ಮಲೆ ಕೊರತಿಗಳು** **ರಾಗ:ಮೋಹನ**

ಕೊಲ್ಲಿ ಮಲೆ ಕೊರತಿಗಳು। ನಾವು ಅಕ್ಕ ತಂಗಿ ಗೆಳತಿಯರು। ನೋಡೋದಕ್ಕೆ ಚೆನ್ನಿಗರು। ಕೆಲಸ ಮಾಡೋದ್ರಲ್ಲಿ ಚಿನ್ನಗಳು॥ಪ॥ ಕೊಲ್ಲಿ ಮಲೆ ಕಡೆಯಿಂದ ಬಂದೇವು। ನಾವು ಆಡಿಪಾಡಲೆಂದು ಇಲ್ಲಿಗೆ ಬಂದೇವು॥ ಸೂಜಿ ಮಣಿ ಮುತ್ತು ಮಣಿ ಮಾರುತೇವೆ। ಆದರೆ ಮಾನವನ್ನು ಕಾಸಿಗೆಂದೂ ಮಾರುವರಲ್ಲ॥

**ಪಚ್ಚೆಮಲೆ ಪವಳಮಲೆ (ತಮಿಳು)** **ರಾಗ:ಮೋಹನ**

ಪಚ್ಚೆಮಲೆ ಪವಳಮಲೆ ಎಂಗಳದು ನಾಡು। ಅಂದ ಪರಮಶಿವನ್ ವಾಳರದುಂ ಎಂಗಳದು ನಾಡು॥2ಸಾರಿ॥ ಕೊಚ್ಚಿಮಲೆ ಕೊಡಗುಮಲೈ ಎಂಗಳದು ನಾಡು। ಅಂದ ಕುಮರೇಶನ್ ವಾಳರದುಂ ಎಂಗಳದು ನಾಡು॥2ಸಾರಿ॥ ಪಚ್ಚೆ ಕುತ್ತಿಕೊಳ್ಳುವಾರುಂಡೋ? ಇಂದ ನಾಟ್ಟಿಲೇ ಪಾಸಿವಾಂಗಿಕೊಳ್ಳುವಾರುಂಡೋ? ಧಣ ಧಣ ಧಣ ಧಣ ಧಣ ಧಣ॥1॥ ನಾಗಪಟ್ಟಿಣಂ ಜಿಲ್ಲಾವಿಲೆ ನಡಂದುಕುತ್ತಿನೋಂ। ಚೆನ್ನೈಪಟ್ಟಿಣಂ ಜಿಲ್ಲಾವಿಲೆ ಸೇರ್‌ಂದು ಕುತ್ತಿನೋಂ ಕೋಯಂಬತ್ತೂರ್ ಜಿಲ್ಲಾವಿಲೆ ಕೂಡಿಕುತ್ತಿನೋಂ। ತಂಜಾವೂರು ಜಿಲ್ಲಾವಿಲೆ ತಾವಿಕುತ್ತಿನೋಂ ಇಂದ ಬೆಂಗಳೂರು ಜಿಲ್ಲಾವಿಲೆ ಪಾಡಿ ಕುತ್ತಿನೋಂ॥2॥ ನಲ್ಲ ನಲ್ಲ ಪಾಂಬುಪಚ್ಚೆ ನಲ್ಲ ನಲ್ಲ ತೇಳುಪಚ್ಚೆ। ನಲ್ಲ ನಲ್ಲ ಕೊಕ್ಕು ಪಚ್ಚೆ। ನಲ್ಲ ನಲ್ಲ ಪುರಾಪಚ್ಚೆ॥3॥

**ಬೀದಿ ಬೀದಿಯ ಮೇಲೆ ಹೊರಟಾಳು** **ರಾಗ:ಆನಂದಭೈರವಿ**

ಬೀದಿ ಬೀದಿಯ ಮೇಲೆ ಹೊರಟಾಳು ಕೊರವಂಜಿ। ಕೇರಿ ಕೇರಿಯ ಮೇಲೆ ಹೊರಟಾಳು ಕೊರವಿ ಕಣಿಯೊ ಕಣಿಯೋ ಎಂದು ಸಾರ್‍ಯಾಳೊ। ಬಾರಮ್ಮ ಕೊರವಂಜಿ ಬಾರೆ ನಮ್ಮನೆಗೆ॥2ಸಾರಿ॥ ಕಾಸುಕೊಟ್ಟೆವು ನಾವು ಕಣಿ ಹೇಳೆ ಕೊರವಿ। ಕಾಸು ನಮ್ಮನೆಯ ಮುತ್ತಿನರಾಶಿ। ಒಂಟೆ ಕೊಟ್ಟೆವು ನಾವು ಕಣಿಹೇಳೆ ಕೊರವಿ। ಒಂಟೆ ನಮ್ಮನೆಯ ಕುಂಟೆಮ್ಮೆ ಹಿಂಡು। ಇನ್ನೇನು ಬೇಕಮ್ಮಿ ಬಿನ್ನಾಣಿ ಕೊರವಿ। ಮತ್ತೇನು ಬೇಕಮ್ಮಿ ಮಾಯಾವಿ ಕೊರವಿ॥ಬೀದಿ॥ ಹಾಡುವುದು ಆಡುವುದು ಅಲ್ಲಿ ಇಲ್ಲಿ ನೋಡುವುದು। ಬೇಡಿ ಬಂದ ಜನರಿಗೆಲ್ಲ ಒಳ್ಳೆ ಕಣಿ ಹೇಳುವುದು। ಬದುಕಮ್ಮಿ ನೀ ಬದುಕಮ್ಮಿ ॥ಬೀದಿ॥ ಬಡಿಗರ ಮನೆಗೆ ಹೋಗಿದ್ದೆ ಮಗಳೆ। ಭಾರಿ ಮರದಡಿ ಮಲಗಿದ್ದೆ ಮಗಳೆ। ಬ್ಯಾಡರ ಗಾಳಿ ನಿನಗ್ಹಿಡಿದಾವೆ ಮಗಳೆ। ಭಾರಿಯ ಪೂಜೆಯ ಹಾಕಲು ಬೇಕು। ಮತ್ತೊಮ್ಮೆ ಬರುವೆನು ಮರೆಯದಿರಿ। ಕಣಿಯಾ ನಾ ಹೇಳುವೆ ಆನಂದದಿ।

ಇಂಥ ಕೊರವಂಜಿ ನೀವೆಲ್ಲು ಕಾಣೆರಿ। ಒಲವೀನ ಕಣಿಯು ನಾನಮ್ಮ ।।ಬೀದಿ।।

## ಚಿತ್ರಕಾರ

### ಮೈಮರೆಸುವ ಚಿತ್ರಕಾರ

ಮೈಮರೆಸುವ ಚಿತ್ರಕಾರ। ಕುಂಚ ಕುಶಲ ತೋರಲೆಂದು। ಕೊಂಚ ಸಮಯ ಹೊರಗೆ ಬಾ, ಹೊರಗೆ ಬಾ।।1।। ಗುಡಿ ಗುಹೆಯ ಗೋಡೆ ಮೇಲೆ ಮಾಡು। ಸೂರು ಹೊಸಲಿನ ಮೇಲೆ। ಮತ್ತೆ ಚಿತ್ರ ಬಿಡಿಸು ಬಾ। ಮತ್ತೆ ಚಿತ್ರ ಬಿಡಿಸು ಬಾ।।2।। ಸಪ್ತವರ್ಣ ಕುಂಡವೆಲ್ಲ। ತುಂಬಿ ಉಕ್ಕಿ ಹರಿಸಿ ನೀ। ಮನಕೆ ಸ್ಫೂರ್ತಿ ನೀಡು ಬಾ। ನೀ ಮನಕೆ ಸ್ಫೂರ್ತಿ ನೀಡು ಬಾ।।3।। ಯುಗದ ಕರೆಯ ಕೇಳಿ ನೀನು। ಜಗದ ಕೀರ್ತಿ ಶಿಖರವಾಗಿ। ಶ್ರೀ ಚಿತ್ರಕಾರ ಬೇಗ ಬಾ।।4।।

## ರೈತ

### ಕುಡುಗೋಲ್ ಗುದ್ದಲ್ಲಿ ಹಿಡಿದೋಡಿ ರಾಗ:ಬೇಹಾಗ್

ಕುಡುಗೋಲ್ ಗುದ್ದಲಿ ಹಿಡಿದೋಡಿ ಬನ್ನಿರೋ। ಒಣಭೂಮಿಯಲ್ಲಿ ಬೆಳೆ ತೆಗೆಯೋಣ। ದುಡಿದು ದುಡಿದು ಜೀವ ತೇಯೋಣ। ದುಡಿಮೆಯಲ್ಲಿ ಸುಖ ಕಾಣ್ಸೋಣ ನಾವ್।।1।। ಸಂತೋಷದ ನೇಗಿಲಲ್ಲಿ ಉತ್ತೋಣ। ಸುಖದ ಬೀಜವನು ಬಿತ್ತೋಣ। ಶ್ರಮದ ನೀರನೆರೆ ದಾಡೋಣ।ಧರ್ಮಗೊಬ್ಬರವ ಹಾಕೋಣ। ಸತ್ಯಸೊಪ್ಪಹಾಕಿ ತುಳಿಯೋಣ। ನೀತಿ ನೊಗದಿ ನೀರೆಳೆಯೋಣ।।2।। ನಿತ್ಯದೇವನನು ನಮಿಸೋಣ। ಅಸತ್ಯ ಕಳೆ ಕಿತ್ತೊಗೆಯೋಣ। ಕೆಟ್ಟನಡತೆ ಕೀಟ ಕೊಲ್ಲೋಣ। ಭೂಮಿಯೊಡತಿಯಲಿ ಬೇಡೋಣ। ಪುಣ್ಯ ಬುತ್ತಿ ಹೊಲ ಕೊಯ್ಯೋಣ। ಮುಕ್ತಿ ನೆರಳಿನಲಿ ಉಣ್ಣೋಣ। ಬಂದ ಒಳ್ಳೆ ಬೆಳೇ ಬಡಿಯೋಣ। ತಂದು ಮನೆಯಾಗೆ ತುಂಬೋಣ। ಜನುಮ ಜನುಮಕೂ ಉಣ್ಣೋಣ।।3।।

### ದುಡಿಯೋಣ ಬಾರಣ್ಣ ರಾಗ:ದುರ್ಗ

ದುಡಿಯೋಣ ಬಾರಣ್ಣ ದುಡಿಯೋಣ ಬಾಬಾ।।ಪ।। ಎತ್ತನು ಪಡೆದು ನೇಗಿಲ ಪಿಡಿದು ಹೊಲದೊಳಗಿಳಿದು ದುಡಿಯೋಣ ಬಾಬಾ।। ಹೊಲವನ್ನು ಉತ್ತಿ ಬೀಜವ ಬಿತ್ತಿ ನೀರನ್ನು ಎತ್ತಿ ದುಡಿಯೋಣ ಬಾಬಾ।। ಸಾಲ್ಗಳ ರಚಿಸಿ ಗಿಡಗಳ ಬೆಳೆಸಿ ಹೊಲವ ಸಿಂಗರಿಸಿ ದುಡಿಯೋಣ ಬಾಬಾ।।ಕೃಷಿನಮ್ಮ ಪ್ರಾಣ ಬಡವರ ತ್ರಾಣ ಮೈ ಬೆವರಿನ ದಾನ ದುಡಿಯೋಣ ಬಾಬಾ।। ದುಡಿತವೆ ನಿತ್ಯ ಬಡವರ ನೃತ್ಯ ಅಡಗಿದೆ ಸತ್ಯ ದುಡಿಯೋಣ ಬಾಬಾ।।ಹೊಲದೊಳು ಅನ್ನ ಬೆಳೆವುದು ಚಿನ್ನ ಮರೆಯದಿರಣ್ಣ ದುಡಿಯೋಣ ಬಾಬಾ।। ಭಾರತಮಾತೆ ನಮಗನ್ನದಾತೆ ನವರತ್ನ ಜಾತೆ ದುಡಿಯೋಣ ಬಾಬಾ।।

### ನೇಗಿಲ ಹಿಡಿದಾ ಹೊಲದೊಳು

ನೇಗಿಲ ಹಿಡಿದಾ ಹೊಲದೊಳು ಹಾಡುತ ಉಳುವ ಯೋಗಿಯ ನೋಡಲ್ಲಿ। ಫಲವನು ಬಯಸದೆ ಸೇವೆಯ ಪೂಜೆಯು ಕರ್ಮವೆ ಇಹಪರ ಸಾಧನವು। ಕಷ್ಟದೊಳನ್ನವ ದುಡಿವನೆ ತ್ಯಾಗಿ। ಸೃಷ್ಟಿಯ ನಿಯಮದೊಳವನೇ ಭೋಗಿ।। ಬಾಳಿತು ನಮ್ಮೀ ನಾಗರಿಕತೆ ಸಿರಿ ಮಣ್ಣುಣಿ ನೇಗಿಲಿನಾಶ್ರಯದಿ। ನೇಗಿಲ ಹಿಡಿದ ಕೈಯಾಧಾರದಿ ದೊರೆಗಳು ದರ್ಪದೊಳಾಳಿದರು। ನೇಗಿಲ ಬಲದೊಳು ವೀರರು ಮೆರೆದರು ಶಿಲ್ಪಿಗಳೆಸೆದರು ಕವಿಗಳು ಬರೆದರು।। ಕಣವನು ಕಡಿಯುತ ನೀರನು ಹೊಡೆಯುತ ಮೇಟಿಯ ಕುಣಿಯನು ಅಗೆಯುವರು। ತೆನೆಯನು ಮುರಿಯುತ ಹೆಸರನು ಹೇಳುತ ಗುಂಪಿಯ ನೆಳೆಯುತ ಒಗೆಯುವರು।। ಹಂತಿಯ ಒಡೆಯುತ ಕಂಕಿಯ ತೆಗೆಯುತ ಬೆಳಗಿನ ವರೆಗೂ ಹಾಡುವರು ಕಾಳನು ತೂರುತ ಗಾಡಿಯ ಹೇರುತ ಊರಿನ ಕಡೆಗೆ ಓಡುವರು।। ಯಾರೂ ಅರಿಯದ ನೇಗಿಲ ಯೋಗಿಯೆ ಲೋಕಕೆ

ಅನ್ನವನೀಯುವನು। ಹೆಸರನು ಬಯಸದೆ ಅತಿ ಸುಖ ಬಯಸದೆ ದುಡಿವನು ಗೌರವಕಾಶಿಸದೆ। ನೇಗಿಲ ಕುಳದೊಳಗಡಗಿದೆ ಕರ್ಮ ನೇಗಿಲ ಮೇಲೆಯೆ ನಿಂತಿದೆ ಧರ್ಮ॥

**ನೇಗಿಲ ಹೊಡಿಲಾಕ ಬಾ** **ರಾಗ: ಮೋಹನ**

ನೇಗಿಲ ಹೊಡಿಲಾಕ ಬಾ ಗೆಳೆಯಾ। ಈಗ ಮಾಗಿಯ ದಿನ ಬಂತು ಬಾ ಗೆಳೆಯಾ। ಬಾಗಿ ದುಡಿಯಬೇಕು ಬಾ ಗೆಳೆಯಾ। ಕರಿಕಿ ಹೋಗುವ ತನಕ ನೀ ಬಾ ಗೆಳೆಯ॥ಪ॥ ಎಂಟರ ನೇಗಿಲ ಹೂಡೋಣನಾವ್। ಒಂಟಿಕಾಲ ಮೆಟ್ಟುತ ನೋಡೋಣ। ಕಂಟಿ ಕಸಹಸನು ಮಾಡೋಣ। ಹೊಲಕಂಟಿದ ಕರಿಕಿಯ ತೋಡೋಣ॥1॥ ಉರಿಬಿಸಿಲೀಗತಿ ಹೆಚ್ಚೈತಿ। ಹೊಸ ಕರಿಕಿ ಕಣೆಗಿಲದಿ ಮುಚ್ಚೈತಿ। ಎರಕಲು ಬೀಡಿಲಿ ಬಿಚ್ಚೈತಿ। ಹದವರಿತೀ ನೇಗಿಲ ಹಚ್ಚೈತಿ॥2॥ ಎಲೆಅಡಿಕೆ ತಂಬಾಕು ತಿನ್ನೋಣ। ಎಕ್ಕೀ ಎಲಿಯ ಬತ್ತಿಯ ಕಟ್ಟಿ ಸೇದೋಣ। ಗಳೆ ಸಜ್ಜು ಮಾಡಿ ಚಾ ಎನ್ನೋಣ। ಸಂಜಿ ಎವೇಳೆಯಕ್ಕೆಗಳೆ ಬಿಟ್ಟು ಸಾಗೋಣ॥3॥ ಮೊದಲಿಗೆರಡು ಬಲಿತಾ ಕೋಣ। ಮತ್ತೆ ಅದರ ಮುಂದೆ। ನಮ್ಮ ನಾಡ ದನಾ। ತುದಿಯಲ್ಲಿ ಮೂಡಲು ಬಸವಣ್ಣಾ। ತುಟ್ಟ ತುದಿಗೆ ಕಿಲಾರಿ ದನಾ ಜೋಡಿಸೋಣಾ॥4॥ ಬಾದು ಬದವು ಹಸನು ಮಾಡೋಣ। ಹೊಲ ಹಾದಿಯ ಜನ ನಿಂತು ನೋಡಲಿನ್ನ। ಯಾದವಾಡ। ಹನುಮ ದೇವರನ ನೆನೆದು ಪಾದಕ್ಕೆ ಶರಣಾರ್ಥಿ ಮಾಡೋಣ॥5॥

**ನೇಗಿಲಾ ಯೋಗಿ ನೀ ಬಾರಯ್ಯ** **ರಾಗ: ರೀತಿಗೌಳ**

ನೇಗಿಲಾ ಯೋಗಿ ನೀ ಬಾರಯ್ಯ ಹೊರಗೆ। ತೂಗುತಿಹ ತೂಕಡಿಕೆ ತಿಳಿದೆದ್ದು ಧರೆಗೆ। ಸಾಗಿ ಬಾ ಬಾಂದಳದೆ ಕಾರ್ಮೇಘ ಮೊಳಗೆ। ಕೂಗುತಿರೆ ಭಾರತಿಯ ಕೆಂದುಟಿಯ ಒಳಗೆ॥ಪ॥ ಕಾದಿಹುದು ಮಳೆಗಾಲ ನೀ ಬರುವೆಯೆಂದು। ಮೋದದಿಂದಾ ಎದ್ದು ಮಾಡಿ ಮನ ಮುಂದು। ಜೋಡೆತ್ತಿನಾ ತೇರ ಸೆಳೆದು ನೀ ಬಂದು। ಮಾಡು ನೀ ಘನಕಾರ್ಯ ಜನಸೇವೆಗೆಂದು॥1॥ ಬಡತನ ದಳ್ಳುರಿಯು ನಾಡಿನೊಳಗಿಂದು। ಕಡಲಾಗಿ ಮೆರೆಯುತಿದೆ ಜವಗೆ ಸರಿ ಎಂದು। ಸಡಗರದಿಂ ಹೆಡೆಯೆತ್ತಿ ಗುಡುಗುಡಿಸಿ ಬಂದು। ಕೆಡಹುಧರೆ ತಳಕೆ ಹಿರಿ ಪ್ರಳಯಾ ನೀನೆಂದು॥2॥ ಕಲಿಯುಗದಾ ಬಲರಾಮ ಚಿರವಾಗಿ ಬಾಳು। ಬಲುಹನೊಳು ನಾಡ ದುಮ್ಮಾನವನು ತಾಳು। ಚೆಲುವಿನಾ ಚಿಲುಮೆಗೆ ಎಸಗದೆ ಹಾಡು। ಕಾಲನಿಗೂ ಕೆಚ್ಚಿದೆಯ ಕೌತುಕವ ಹೇಳು॥3॥

**ಮಣ್ಣಿನಿಂದ ಹೊನ್ನ ತೆಗೆವ** **ರಾಗ: ಮೋಹನ**

ಮಣ್ಣಿನಿಂದ ಹೊನ್ನ ತೆಗೆವ ನಮ್ಮ ಜೀವನಾ। ದುಡಿಮೆಯೇ ದೇವರೆಂಬ ನುಡಿಯು ಪಾವನಾ ॥ಪ॥ ಮುಗಿಲ ಮೋಡ ಆಕಾಶದಿ ಕವಿಯೆ ಸಿಡಿಸಿಡಿದು ನೀರಾಗಿ। ತಾ ಹರಿಯೇ। ಎತ್ತು ನೊಗ ನೇಗಿಲನ್ನು ಹಿಡಿದು ಹೊರಡುವ। ಉತ್ತಿ ಕರ್ಮಭೂಮಿಯಲ್ಲಿ ಬೀಜ ಬಿತ್ತುವ। ಬಿತ್ತೋಣ ಪೈರ ಬೆಳೆಸೋಣ ಓ... ಓ....॥1॥ ವೀರ, ಬೋರ, ಕರಿಯ ಕೆಂಚ ಬನ್ನಿ ನಾಗಿರಂಗಿ ಹೊನ್ನಿ ಸಿದ್ದಿ ಬನ್ನಿ ನೆಟ್ಟ ಗಿಡವು ನೆಟ್ಟಗಾಗಿ ಎದ್ದು ನಿಂತಿವೆ। ಹಚ್ಚ ಹಸುರು ತೆನೆಗಳಿಂದ ಮುಗಿಲ ನಗುತಿದೆ। ಕೀಳೋಣ ಪೈರು, ಮಸೆಯೋಣ ಹೋ... ಹೋ....॥2॥ ಪೈರನು ಕುಯ್ದು ಕಟ್ಟನು ಕಟ್ಟಿ ಇಡುವ। ಮೂಟೆಯ ಕಟ್ಟಿ ಪೈರ ರಾಶಿ ಹೊರುವ। ಲೇ ಲಾಲಿ ಲೇಸೋ ಎಂದು ಹಾಡಿ ಕುಣಿಯುವಾ। ಭೂಮಿತಾಯಿ ಜಗದ ಮಾತೆ ಅವಳ ನೆನೆಯುವಾ। ನೆನೆಯೋಣ ಅವಳ ಭಜಿಸೋಣ॥3॥

**ರೈತ ನಮ್ಮ ಅನ್ನದಾತ** **ರಾಗ:ಆನಂದಭೈರವಿ**

ರೈತ ನಮ್ಮ ಅನ್ನದಾತ, ಹೊಲದಿ ದುಡಿದೆ ದುಡಿವನು। ನಾಡಜನರು ಬದುಕಲೆಂದು ದವಸ ಧಾನ್ಯ ಬೆಳೆವನು॥ ಮಳೆಯ ಗುಡುಗು ಚಳಿಯ ನಡುಗು ಬಿಸಿಲಬೇಗೆ ಸಹಿಸುತ। ಬೆವರು ಸುರಿಸಿ ಕಷ್ಟ ಸಹಿಸಿ ಒಂದೇ ಸಮನೆ ದುಡಿಯುತ॥ ಗಟ್ಟಿದೇಹ ದೊಡ್ಡಮನಸ್ಸು ತಾಯಿಯಿಂದ ಪಡೆದನು। ಯೋಗಿಯಾಗಿ ತ್ಯಾಗಿಯಾಗಿ ಅನ್ನ

ನೀಡುತಿರುವನು।। ಎತ್ತು ಎರಡು ಅವನ ಜೋಡು ಕೂಡಿ ದುಡಿವ ಗೆಳೆಯರು। ಹಿಗ್ಗು ಕುಗ್ಗು ಏನೇಯಿರಲಿ ಹೊಂದಿಕೊಂಡು ನಡೆವರು।।

**ರೈತನೆದ್ದನು ಮುಖವ ತೊಳೆದನು** **ರಾಗ:ಭೌಳಿ**

ರೈತನೆದ್ದನು ಮುಖವ ತೊಳೆದನು ಅಡ್ಡಬಿದ್ದನು ದೇವಗೆ। ಎದ್ದುಹೊರಟನು ಧರಿಸಿ ಉಡುಪನು। ತನ್ನ ಮೆಚ್ಚಿನ ಗದ್ದೆಗೆ।। ಮಂಜು ಮುಸುಕು ತೆರೆಯಲು ಕೋಳಿ ಕೂಗದು ಕೇಳಲು। ಹೊಲದಾ ಬಳಿಯ ಕಣದ ರಾಶಿಯ ನೋಡಿ ಮನವು ಹಿಗ್ಗಲು।। ಸುಗ್ಗಿಯ ಕಾಲ ಬರಲು ನಲಿದು ಹಿಗ್ಗುವ ಸಮಯವು। ಕೊರೆವ ಚಳಿಯಲಿ ಬೆಂಕಿಸುತ್ತಲು ಮೆರೆದು ಕುಣಿಯಲು।। ಸುಗ್ಗಿ ಬಂದು ಹಿಗ್ಗು ತಂದು ಜಗ ಬೆಳಗಲು। ಸೊಗದಿ ರೈತನು ನಗೆಯ ಬೀರುತ ಸಾಗಲು।।

**ಸುತ್ತಮುತ್ತ ಗದ್ದೆಯಲ್ಲಿ** **ರಾಗ:ಪುನ್ನಾಗವರಾಳಿ**

ಸುತ್ತಮುತ್ತ ಗದ್ದೆಯಲ್ಲಿ ಭತ್ತ ಬೆಳೆದು ನಿಂತಿದೆ। ಅತ್ತನೋಡು ಭಾರದಿಂದ ತೆನೆಯು ಹೇಗೆ ಬಾಗಿದೆ। ರೈತ ಬಂದ ಕುಡ್ಲು ತಂದ ಆಗೋ ಪೈರು ಕುಯ್ಲಿಗೆ। ಆತ ನೋಡು ಪೈರು ಮೆದೆಯ ಹಾಕುತಿರುವ ಬಯಲಾಗೆ।। ಕಣವ ಮಾಡಿ ಎತ್ತಿನಿಂದ ಕೊಯ್ದ ಪೈರ ತುಳಿಸುವ। ಕ್ಷಣದಿ ಕಾಳ ಬೇರೆಮಾಡಿ ಹುಲ್ಲು ಮೆದೆಯ ಹಾಕುವ।। ತಂದ ಕಾಳ ಮನೆಯ ತುಂಬಿ ಸುಗ್ಗಿ ಹಬ್ಬ ಮಾಡುವ। ಬಂದ ಒಳ್ಳೆ ಬೆಲೆಗೆ ಅದನು ಮಾರಿ ಹಣವ ಗಳಿಸುವ।।

**ಸಮಯ ನೇಗಿಲು**

ಸಮಯ ನೇಗಿಲು ಹಗಲು ರಾತ್ರಿಗಳ ಜೊಡೆತ್ತುಗಳು ಜನ್ಮ, ಮರಣದ ಸುಗ್ಗಿ ಎರಡು ಸಾಗುವಳಿ ನಡೆದಿದೆ ನಿರಂತರ ನಾವು? ಬೀಜಗಳು ಜನ್ಮ ಮರಣದ ಸುಗ್ಗಿಯಲ್ಲಿ ಬಿದ್ದು ಬೆಳೆದು ಅಳಿದು ಹೋಗೋಣ।।

## ಕಾರ್ಮಿಕ

**ಕಾರ್ಮಿಕ ಜೀವನವೊಂದು** **ಕೆ. ರಾಜಲಕ್ಷ್ಮೀ**

ಕಾರ್ಮಿಕ ಜೀವನವೊಂದು ಕರ್ಮ। ಅದರೊಳಗಿದೆ ಒಂದು ಮರ್ಮ। ಬಾಳಿಬದುಕೋಕುಂಟಿಲ್ಲಿ ಮಾರ್ಗ। ಬೆವರ್‌ಸುರ್‍ಸಿ ದುಡಿದ್ರೆ ಮಾತ್ರ ಸ್ವರ್ಗ।। ಸಂಬ್ಳ ಸಾಕಷ್ಟು ಬೋನಸ್ ಬೇಕಿಷ್ಟು। ಇನ್ಸೆನ್‌ಟೀವ್ ಇಷ್ಟು ಅರಿಯರ್ಸ್ ಅಷ್ಟು। ಕಾರ್ಖಾನೇಲಿ ಸೊಳ್ಳೆ ಕಾಟ ಮನೇಲಿ ತಿಗಣೆ ಕಾಟ। ಬೇಡ ಬೇಡ ಇನ್‌ಕಮ್‌ಟ್ಯಾಕ್ಸನ ಕಾಟ।। ಕ್ಯಾಂಟೀನ್ ಉಂಟು ಯೂನಿಫಾರ್ಮ್ ಉಂಟು ಮೆಡಿಕಲ್ ಉಂಟು ಎಲ್‌ಟಿಸಿ ಉಂಟು। ಸೊಸೈಟಿ ಉಂಟು ಸಾಲಉಂಟು। ಸೈಟು ಉಂಟು ಕ್ವಾರ್ಟರ್ಸ್ ಉಂಟು।। ಪಿಎಫ್ ಉಂಟು ಗ್ರ್ಯಾಚ್ಯುಟಿ ಉಂಟು। ಸತ್ರು ಉಂಟು ಇದ್ರೂ ಉಂಟು। ಸುಖದಲ್ಲುಂಟು ದುಃಖದಲ್ಲುಂಟು। ಎಲ್ಲುಂಟು ಇಂಥನಂಟು?।। ಹಕ್ಕಿಯಂತೆ ಗೂಡು ಬಿಟ್ಟು ಗೂಡು ಸೇರಿ ಹಗಲುರಾತ್ರಿ ಪರಿವೆ ಬಿಟ್ಟು ಫ್ಯಾಕ್ಟ್ರಿ ಸೇರಿ। ಕಾರ್ಮಿಕ ಜೀವನದ ಯಾಂತ್ರಿಕತೆ। ಬದ್ಕಲ್ಲಿ ತುಂಬಿದೆ ಮಾರ್ಮಿಕತೆ।।

## ಬೇಡರು

**ಅತ್ತ ಇತ್ತ ನೋಡುತ್ತಾ ಸುತ್ತಮುತ್ತ** **ರಾಗ:ಬೇಹಾಗ್**

ಅತ್ತ ಇತ್ತ ನೋಡುತ್ತಾ ಸುತ್ತಮುತ್ತ ತಿರುಗುತ್ತಾ। ಬೇಟೆಗಾರ ಬಂದ ಬಿಲ್ಲು ಬಾಣ ತಂದ। ಕಾಡು ಹಂದೀನ್ ಕೊಂಡ ಬೆಂದ ಹಂದೀನ್ ತಿಂದ। ಹೊಟ್ಟೆನೋವು ಎಂದ ಮರದ ಕೆಳಗೆ ಬಿದ್ದ। ಹುಲಿರಾಯ ಬಂದ ಹೊಟ್ಟೆತುಂಬ ತಿಂದ। ಇನ್ನುಬೇಕು ಎಂದ ಬೇಟಾಗಾಗಿ ಹೊರಟ।।

**ಆ... ಯಾರೋಲೆ.... ಭಂಚಿಕಿ** **ರಾಗ:ಬೇಹಾಗ್**

ಆ... ಯಾರೋಲೆ .... ಭಂಚಿಕಿ ಭಂಚಿಕಿ ಭಂ ಭಂ ಭಂ ಬೇಟೆಗಾರರು ನಾವೆಲ್ಲ ಈಟಿ ಹಿಡಿದ ಶೂರರು ಎಲ್ಲಾ।।ಪ।। ಹುಲಿ ಚಿರತೆಗಳ ಭಯವಿಲ್ಲ। ಕಾಡುಮೇಡು ಎಲ್ಲಾ ಒಂದೇ। ಹೊಟ್ಟೆಯ ಪಾಡು ಒಂದಿದೆಯಲ್ಲ। ಬೇಟೆಗಾರರು ನಾವೆಲ್ಲ।।1।। ಹಾರಾಡುವ ಆ ಹಕ್ಕಿಗಳ ಕೂ... ಕೂ... ಗುರಿಹಿಡಿದು ನಾವ್ ಹೊಡೆಯುವೆವು। ಹೋರಾಡುವ ಹುಲಿ ಸಿಂಹಗಳ ಭಂಚಿಕೆ ಚಿಕಿ ಭಂ ಚಿಕಿ..ಚಿಕಿ ಭಂ ಭಂ ಈಟೀಲಿ ಇರಿದು ಕೊಲ್ಲುವೆವು।।2।। ಘೀಳಿಡುವಾ ಆ ಆನೆಗಳ ಭಂಚಿಕಿ ಚಿಕಿಭಂ ಚಿಕಿಭಂ। ಬೀಳಿಸುವಂತಹ ವೀರರು ನಾವು। ಚಂಗನೆ ನೆಗೆಯುವ ಜಿಂಕೆಗಳ ಬಿಂಕದಿ ಹಿಡಿದು ತರುವೆವು ನಾವ್। ಓಡೋಡಿ ಬರುತಿದೆ ನಾಗಣ್ಣ। ಪುಂಗಿಯ ಊದೋ ಬೋರಣ್ಣ ಹೊತ್ತು ಮುಳುಗಿತು ನೋಡಣ್ಣ। ಇಂದಿಗೆ ಬೇಟೆ ಸಾಕಣ್ಣಾ।।4।।

**ಕಾದಾಟಗಾರರು ನಾವು** **ರಾಗ:ವಿಜಯಶ್ರೀ**

ತಂದಾನ ತಾನ ತಾನ ತಾನ ತಾನ ತಂದಾನ। ಕಾದಾಟಗಾರರು ನಾವು ಕಾಡಿನ ರಾಜರು ನಾವು (ಎದೆಗಾರ ಬೇಡರು ನಾವು)2 ಭಲೆ।। ಕೇಸರಿಯನು ಕಡೆಹಾಕಿ ಹೊಡೆದಟ್ಟಿದ ಶೂರ। ಓಡಿ ಬರುವ ಜಿಂಕೆ ಮೊಲವನೋಟ ಹಿಡಿದ ಶೂರ। ಬೆಳಗಿನಿಂದ ತಿರುಗಾಡಿ ಸೋತು ಬೆಂಡಾಗಿ। ಅಲ್ಲಿ ಇಲ್ಲಿ ಹುಡುಕುವೆವು ಈ ಹೊಟ್ಟೆಗಾಗಿ।।1।। ತಂದಾನ ತಾನ ತಾನ ತಾನ ತಾನ ತಂದಾನ।। ಓಡುತಿದೆ ಜಿಂಕೆಯೊಂದು ಬಂಗಾರದ ಬಣ್ಣ। ಅತ್ತ ಇತ್ತ ಸುತ್ತ ಮುತ್ತ ನೋಡುತಿದೆಯಣ್ಣ। ಬಿಲ್ಲನೆತ್ತಿ ಬಾಣಹೂಡಿ ನೋಟ ಹಿಡಿವ ಮಾಟ। ಬೇಟೆಗಾರ ಬಲ್ಲನಯ್ಯ ಇದುವೆ ನಮ್ಮ ಆಟ। ತಂದಾನ ತಾನ ತಾನ ತಾನ ತಾನ ತಂದಾನ।।2।।

## ಹೂವಾಡಗಿತ್ತಿ

**ಬನ್ನಿ2 ಹೂ ಕೊಳ್ಳ ಬನ್ನಿ** **ರಾಗ: ರತಿಪತಿಪ್ರಿಯ**

ಬನ್ನಿ ಬನ್ನಿ ಹೂ ಕೊಳ್ಳ ಬನ್ನಿ। ಹೊನ್ನ ಸಂಪಿಗೆ ಕೊಳ್ಳಿ। ಚೆಂಗುಲಾಬಿಯ ಕೊಳ್ಳಿ। ಮಲ್ಲೆ ಮಲ್ಲಿಗೆ ಕೊಳ್ಳಿ। ಜಾಜಿ ಪಾದರಿ ಕೊಳ್ಳಿ।।1।। ಇದೊ ಈಗಲೆ ಆಯ್ದ ಬಿಡಿ ಹೂವ ಕೊಳ್ಳಿ। ತುರುಬಿನ ಬೆಡಗಿಗೆ ತೋರ ದಂಡೆಯ ಕೊಳ್ಳಿ। ಮಡದಿ ಮಕ್ಕಳಿಗೆಲ್ಲ ಮುಡಿಯಲಿಹುದು ಕೊಳ್ಳಿ। ಗುಡಿಗೆ ದೇವರಿಗಿಡೆ ನೀಡುಮಾಲೆಯ ಕೊಳ್ಳಿ।।2।। ಹಸೆನಿಲ್ವ ಚೆಲುವರ ಕೊರಳ ಸಿಂಗರಕಿದೆ। ವಧುಗೆ ವರಣಮಾಲೆ ವರನನೊಲಿಪಮಾಲೆ। ವರನು ನಗುತ ಬಂದು ವಧುವ ಗೆಲ್ಲುವ ಮಾಲೆ। ಸರಸದಿ ಗೆಲಿದವ ವೀರ ವಿಜಯದ ಮಾಲೆ।।3।। ಹೊಸದಾಗಿ ಬಂದಿಹ ದುಂಡು ಮಲ್ಲಿಗೆ ಕೊಳ್ಳಿ। ನುಡಿಗೆ ನಾಡಿಗೆ ಬಾಳಿಗೊಸಗೆ ಚೆಲ್ಲಿರಿ ಬನ್ನಿ।।4।।

**ಹೂವನು ಮಾರುತ**

ಹೂವನು ಮಾರುತ ಹೂವಾಡಗಿತ್ತಿ ಹಾಡುತ ಬರುತಿಹಳು। ಘಮಘಮ ಹೂಗಳುಬೇಕೇ ಎನ್ನುತ ಹಾಡುತ ಬರುತಿಹಳು। ಬಿಳುಪಿನ ಮಲ್ಲಿಗೆ ಹಳದಿಯ ಸಂಪಿಗೆ ಹಸುರಿನ ಹೊಸ ಮರುಗ; ಹಾಕಿ ಕಟ್ಟಿರುವೆ ಬೇಕೇ ಎನುತ ಹಾಡುತ ಬರುತಿಹಳು।। ಹೊಸ ಸೇವಂತಿಗೆ ಹೊಸ ಇರುವಂತಿಗೆ ಅರಸಿನ ತಾಳೆಯಿದೆ। ಅಚ್ಚ ಮಲ್ಲೆಯಲಿ ಪಚ್ಚೆಯತೆನೆಗಳು ಸೇರಿದ ಮಾಲೆಯಿದೆ।। ಕಂಪನು ಚೆಲ್ಲುವ ಕೆಂಪುಗುಲಾಬಿ ಅರಳಿದ ಹೊಸಕಮಲ। ಬಿಳುಪಿನ ಜಾಜಿ ಹಳದಿಯ ಜಾಜಿ ಅರಳಿದ ಬಿಳಿಕಮಲ।। ಬಗೆ ಬಗೆ ಹೂಗಳು ಬೇಕೇ ಎನ್ನುತ ಹಾಡುತ ಬರುತಿಹಳು।

## ದೊಂಬರಾಟ

### ಢುಮ್ಮ್‌ಢಮ2 ಡೋಲು ಬಡಿದ

ಢುಮ್ಮ್‌ಢಮ ಢುಮ್ಮ್‌ಢಮ ಡೋಲು ಬಡಿದ ಹುಡುಗ ಹಾರಿ ಹಾರಿ ಕುಣಿದಳು ಹಕ್ಕಿಯಂತೆ ಹುಡುಗಿ।।1।।
ಢುಮ್ಮ್‌ಢಮ ಢುಮ್ಮ್‌ಢಮ ಡೋಲು ಬಡಿದ ಹುಡುಗ ತಂತಿ ಮೇಲೆ ನಡೆದಳು ಮಿಂಚಿನಂತೆ ಹುಡುಗಿ।।2।।
ಢುಮ್ಮ್‌ಢಮ ಢುಮ್ಮ್‌ಢಮ ಡೋಲು ಬಡಿದ ಹುಡುಗ ಉಂಗುರದೊಳಗೆ ಹಾದಳು ಬೆರಳಿನಂತೆ ಹುಡುಗಿ।।3।।
ಢುಮ್ಮ್‌ಢಮ ಢುಮ್ಮ್‌ಢಮ ಡೋಲು ಬಡಿದ ಹುಡುಗ ಅಂಗೈ ಮೇಲೆ ನಿಂತಳು ಗೊಂಬೆಯಂತೆ ಹುಡುಗಿ।।4।।
ಢುಮ್ಮ್‌ಢಮ ಢುಮ್ಮ್‌ಢಮ ಡೋಲು ಬಡಿದ ಹುಡುಗ ಹೆಜ್ಜೆಯಿಟ್ಟು ಬಂದಳು ಗೆಜ್ಜೆಯಂತೆ ಹುಡುಗಿ।।5।।
ಢುಮ್ಮ್‌ಢಮ ಢುಮ್ಮ್‌ಢಮ ಡೋಲು ಬಡಿದ ಹುಡುಗ ಝಣ ಝಣ ಎಣಿಸಿದಳು ಜಾಣೆ ಅವನ ಹುಡುಗಿ।।6।।

## ಸ್ವಯಂಸೇವಕ

### ವಿಶ್ವ ಮನುಜರು ವಿಶ್ವ ತನುಜರು

ವಿಶ್ವ ಮನುಜರು ವಿಶ್ವ ತನುಜರು ವಿಶ್ವಶಾಂತಿಗೆ ಶ್ರಮಿಪೆವು। ವಿಶ್ವಧಾಮಕೆ ಪ್ರೇಮದಿಂದಲಿ ಶುಭವ ಕೋರುತ ಬಾಳುವಾ।। ಸರ್ವ ಸಮತೆಗೆ ವಿಶ್ವ ಪ್ರೀತಿಗೆ ಸುಜನರೆಲ್ಲರೂ ಶ್ರಮಿಸುತಾ ಸೇವಕರ ಬಳಗವು ನಾಡಕೀರ್ತಿಗೆ ಪಾತ್ರವು।। ನವ ತರುಣರೇ ಭವ್ಯ ಪ್ರಜೆಗಳೇ ನಾಡ ಏಳ್ಗೆಗೆ ದುಡಿಯುವಾ ನಾವು ಯುವಜನ ನಾಡ ಪ್ರಜೆಗಳು ನವ್ಯ ನಾಡನು ಕಟ್ಟುವಾ।।

## ಬುಡುಬುಡಿಕೆ

### ಮುಂಜಾನೆದ್ದು ಮುಖವನು ತೊಳೆದು — ರಾಗ: ಬೇಹಾಗ್

ಮುಂಜಾನೆದ್ದು ಮುಖವನು ತೊಳೆದು। ಶಾಲೂ ಧೋತ್ರ ಬೆಚ್ಚಗೆ ಹೊದ್ದು। ಮಾತು ಮಾತಿಗೆ ಮಾಡುತ ಸದ್ದು। ಬಂದ ಬಂದ ಬುಡುಬುಡಿಕಣ್ಣಾ।। ಹುಡುಗರು ಎಲ್ಲಾ ಸಡಗರದಿಂದ। ಫಣ್ಣಗೆ ನೆಗೆಯುತ ಕುಣಿಯಲು ಚಂದ। ಅಂದದ ನುಡಿಗಳ ನುಡಿಯುತ ಬಂದ। ಬಂದ ಬಂದ ಬುಡುಬುಡಿಕಣ್ಣಾ।। ಕಾಸೂ ದುಡ್ಡು ಕೊಳ್ಳುವುದಿಲ್ಲ। ಬಟ್ಟೇ ಚಿಂದಿಯ-ಬೇಡುವನಲ್ಲ। ಯಾರಿಗೂ ಸೋಲದ-ಮಾತಿನಮಲ್ಲ। ಬಂದ ಬಂದ ಬುಡುಬುಡಿಕಣ್ಣಾ।। ಬುಡುಬುಡಿಕಣ್ಣಾ ಬುಡುದಲಿ ಸಣ್ಣ। ಬಲಗೈ ಬೆರಳು ಕುಣಿಸುವನಣ್ಣ। ಧೋತ್ರದ ಅಂಚು-ಗುಲಾಬಿ ಬಣ್ಣ। ಬಂದ ಬಂದ ಬುಡುಬುಡಿಕಣ್ಣಾ।।

### ಬಂದ ಬಂದ ಬುಡುಬುಡಕಣ್ಣ — ರಾಗ: ಗೌಳಿಪಂತು

ಬಂದ ಬಂದ ಬುಡುಬುಡಕಣ್ಣ।।ಪ।। ಬಣ್ಣ ಬಣ್ಣದ ಬಟ್ಟೆಯ ಹೊದ್ದು। ಮೀಸೆಯನೇರಿಸಿ ಪೇಟವ ಧರಿಸಿ। ಬಂದ ಬಂದ ಬುಡುಬುಡುಕಣ್ಣ।। ಗೌಳಿಯ ಶಕುನವ ನುಡಿಯುತಲಿಹನು। ಜನರಾತಂಕವ ಕಳೆಯುತಲಿಹನು। ಬಂದ ಬಂದ ಬುಡುಬುಡುಕಣ್ಣ।। ಕಾಸು ಗೀಸು ಬೇಡುವವನಲ್ಲ। ಬಟ್ಟೆ ಬಂದರೆ ಬಿಡುವವನಲ್ಲ। ಬಂದ ಬಂದ ಬುಡುಬುಡುಕಣ್ಣ।। ನುಡಿದದ್ದೆಲ್ಲಾ ನಿಜವಂತಣ್ಣ। ಇಂದಿರೆ ಬಂದರೆ ಜಯವಂತಣ್ಣ। ಬಂದ ಬಂದ ಬುಡುಬುಡುಕಣ್ಣ।। ಮಕ್ಕಳ ಕ್ಷೇಮ ಕೋರುವನಣ್ಣ। ದೇವರ ಸ್ಮರಣೆ ಮಾಡುವನಣ್ಣ। ಬಂದ ಬಂದ ಬುಡುಬುಡುಕಣ್ಣ।।

### ಬುಡುಬುಡುಕೆ ಜೋಗಣ್ಣ

ಬುಡುಬುಡುಕೆ ಜೋಗಣ್ಣ। ನಿನದು ಯಾವ ಊರಣ್ಣ। ಹೆಸರು ಏನು ತಿಳಿಸಣ್ಣಾ। ಏರಿಯ ಮೇಲೆ ನಿಂತಿರುವೆ। ಕೇರಿಯ ಒಳಗೆ ನಡೆದಿರುವೆ। ಮನೆ ಮನೆ ತಿರುಗಿ ಬೇಡಿರುವೆ। ಕೊಟ್ಟವರನ್ನು ಹರಸಿರುವೆ। ಕರಿಯ

ಕೋಟು ತೊಟ್ಟಿರುವೆ। ಕೆಂಪು ರುಮಾಲು ಸುತ್ತಿರುವೆ। ಕೈಯಲ್ಲಿ ಬುಡುಕೆ ಹಿಡಿದಿರುವೆ। ಬುಡು ಬುಡು ಸದ್ದನು ಮಾಡಿರುವೆ। ಬರಿಗಾಲಲ್ಲಿ ನಡೆದಿರುವೆ। ಬಗಲಿಗೆ ಚೀಲ ಹಾಕಿರುವೆ। ಸಣ್ಣ ಮಕ್ಕಳ ಹೆದರಿಸುತಾ। ಮಳೆ ಬೆಳೆ ಶಾಸ್ತ್ರ ಹೇಳಿರುವೆ। ತವರು ವಿಚಾರ ತಿಳಿಸುತ್ತಾ। ಹೆಣ್ಮಕ್ಕಳ ಮನ ಗೆದ್ದಿರುವೆ। ಕೊಟ್ಟದ್ದನ್ನು ಪಡೆದುಕೊಂಡು। ನಗುನಗುತ ನಡೆದಿರುವೆ॥

## ಇತರೆ

### ಸಿಹಿ ನುಡಿಯ ನಗೆ ಗುಡಿಯ (ನಗೆಗಾರರು) ರಾಗ:ಕಾಂಬೋಧಿ

ಸಿಹಿನುಡಿಯ ನಗೆ ಗುಡಿಯ ಕಟ್ಟುವರು ನಾವು। ಜಂಭಿಗರ ಬಿಗಿಮುಡಿಯ ಬಿಚ್ಚುವರು ನಾವು। ತಾರೆ ಮರಿ ಮಿಂಚುಗಳ ತಂಪು ಬೆಳುದಿಂಗಳಿನ ಒಳಗುಟ್ಟುಗಳು ನಾವು॥ ಪೊಡವಿಯನು ಗಲಿರೆನಿಪ ಸೊಟ್ಟುಗಳು ನಾವು॥ ಸೊನ್ನೆಯಲಿ ಚಿಕ್ಕುಗಳು ಕುಕ್ಕುವರು ನಾವು। ಸಾಲದಲಿ ಶಾಲ್ಯಾನ್ನ ಮುಕ್ಕುವರು ನಾವು॥ ನಿಮ್ಮ ಚಂದದ ತಳಕು ನಮ್ಮ ಇಂದಿನ ಅಣುಕು। ನಿಮ್ಮ ಹೆಮ್ಮೆಯ ಕೆಚ್ಚು ನಮ್ಮ ಕಣ್ಣಿಗೆ ಪೆಚ್ಚು। ಹಬ್ಬಿಗರು ಹಾಸ್ಯೇಂದ್ರ ಜಾಲಿಗರು ನಾವು। ನಮ್ಮ ಮಿದು ಬಾಮಿನಿಂ ತೊಲಗುವುದು ನೋವು॥ ತಾರೆಯರ ನೃತ್ಯಗಳ ಮಾರಕರ ಕೃತ್ಯಗಳ। ಒಳಚುಚ್ಚುಗಳು ನಾವು। ಓರೆಗಣ್ಣುಗಳನ್ನೇ ಬೀರುವೆವು ನಾವು॥ ಅಷ್ಟತರ ವಕ್ರತೆಯೆ ದೃಷ್ಟಿಪಥವೆಮಗೆ। ಹುಳಿಮೋರೆಗೆಮ್ಮನುಡಿ ಅಲ್ ಕಲಿಯು ನೋಡ॥ ನಮ್ಮ ಲೇಖನಿಗಿಂತ ಚೂರಸಿಯ ಕಾಣೆ। ನಮ್ಮ ಮಸಿಯೇ ತೀರ್ಥ ಶುಂಡಲಿಗನಾಣೆ॥

### ನಾರಣಪ್ಪ ನಾರಾಣಪ್ಪ ಎಲ್ಲಿ ಹೋದ್ಯಪ್ಪ (ಮಾಣಿ) ರಾಗ:ಪುನ್ನಾಗವರಾಳಿ

ನಾರಣಪ್ಪ ನಾರಣಪ್ಪ ಎಲ್ಲಿ ಹೋದ್ಯಪ್ಪ। ಇಡ್ಲಿ ಸಾಂಬಾರ್ ಚಟ್ನಿ ವಡೆ ಬೇಗ ತಾರಪ್ಪ। ದೂರದಿಂದ ನೆಂಟರ ಜತೆ ಬಂದಿದ್ದೀನಪ್ಪ। ಬೇಗ ತಿಂಡಿ ತಂದು ಕೊಟ್ಟು ಹಸಿವು ನೀಗಪ್ಪ॥ ಕೇರಿ ಕೇರಿ ಎಲ್ಲ ಅಲ್ದು ಸುಸ್ತಾಗೋಯ್ತಪ್ಪ। ತಿಂಡಿ ತಿನ್ನೋಕಂತ ನಿನ್ನ ಹೋಟ್ಲಿಗ್ ಬಂದ್ವಪ್ಪ॥ ನಾರಾಣಪ್ಪ ನಾರಣಪ್ಪ ಹೋಗ್ಲಿ ಬಿಡಪ್ಪ। ಇಡ್ಲಿ ವಡೆ ಮುಗಿದು ಹೋದ್ರೆ ದೋಸೆ ತಾರಪ್ಪ। ದೋಸೆ ಮೇಲೆ ಕೊಂಚ ಹಸುವಿನ ಬೆಣ್ಣೆ ಹಾಕಪ್ಪ। ಚಟ್ನಿ ಹಾಕೋದ್ ಮಾತ್ರ ನೀನು ಮರೆಯಬೇಡಪ್ಪ। ನಾರಣಪ್ಪ ನಾರಣಪ್ಪ ಚೆಂದಾಗೈತಪ್ಪ ಮತ್ತೆ ಬಂದಾಗೆಲ್ಲ ನೀನು ದೋಸೆ ನೀಡಪ್ಪ॥

